 Photo by A. L. Syed



ಬಹುಮಾನ ಪಡೆದ ಶೀರ್ಷಿಕೆ

ಭುವನಸಂಪತ್ತು

ಕಳಿಸಿದವರು: ಬಿ. ಗಿರಿಜಾಕುಮಾರಿ, ಕುಂದಾಪುರ

# ಈ ಸಂಚಿಕೆಯಲ್ಲಿ

## ದೀಪಾವಳಿಯ ಆಕರ್ಷಣೆ



ಹೆಚ್ಚು ಪುಟಗಳು, ಸುಂದರ ರೇಖಾಚಿತ್ರ ಮತ್ತು ತ್ರಿವರ್ಣ ಚಿತ್ರಗಳು, ಕಥೆಗಳು ಇತ್ಯಾದಿ ಹೆಚ್ಚಿನ ಆಕರ್ಷಣೆಗಳೊಂದಿಗೆ

## ಹಿಂದಿ ಚಂದಮಾಮ
&
## ಮರಾಠಿ ಚಾಂದೋಬಾ

ದೀಪಾವಳಿ (ನವಂಬರು) ಸಂಚಿಕೆ

ಹೊರ ಬೀಳುತ್ತದೆ. ಇಷ್ಟೆಲ್ಲಾ ತುಂಬಿದ್ದರೂ ಸಂಚಿಕೆಯ ಬೆಲೆ ಮಾಮೂಲು **6** ಆಣೆಗಳೇ.

ಉಪೇಕ್ಷೆಯಿಂದಿದ್ದರೆ ಈ ಉತ್ತಮ ಸಂಚಿಕೆ ದೊರಕದೇ ಹೋಗಬಹುದು. ಆದುದರಿಂದ ನಿಮ್ಮ ಪ್ರತಿಗಾಗಿ ಈಗಲೇ ನಿಮ್ಮ ಊರಿನ ಏಜಂಟರಿಗೆ ಹೇಳಿ ಇರಿಸಿರಿ. ಇಲ್ಲವೇ ಇಂದೇ ಚಂದಾದಾರರಾಗಿರಿ.





ಚಂದಮಾಮ ಪಬ್ಲಿಕೇಷನ್ಸ್
ವಡಪಳನಿ :: ಮದರಾಸು-26

## ಡೋಂಗರೇ ಬಾಲಾಮೃತ



ಇದು ಸೊರಗಿ ಕಡ್ಡಿಯಂತಾದ ಚಿಕ್ಕ ಮಕ್ಕಳಿಗೆ ಆರೋಗ್ಯವನ್ನೂ ಪುಷ್ಟಿಯನ್ನೂ ಬಲವನ್ನೂ ಕೊಡುತ್ತದೆ. ಇದರ ಸೇವನೆಯಿಂದ ಮಕ್ಕಳ ಹಲ್ಲುಗಳು ಕಷ್ಟವಿಲ್ಲದೆ ಹೊರ ಬೀಳಲು ಸಹಾಯವಾಗುತ್ತದೆ.

## ಸೂಚನೆ

ಬರುವ ತಿಂಗಳ 'ಚಂದಮಾಮ' ಸಂಚಿಕೆಗಳನ್ನು ಈ ತಿಂಗಳ ಕಡೇ ವಾರದಲ್ಲೇ ಪೋಸ್ಟು ಮಾಡಲಾಗುತ್ತದೆ. ಆ ಸಂಚಿಕೆಗಳು ತಕ್ಕ ಕಾಲದಲ್ಲಿ ನಿಮಗೆ ಸೇರದಿದ್ದರೆ, ನಿಮ್ಮೂರ ಪೋಸ್ಟಾಫೀಸಿನಲ್ಲಿ ನೀವು ಕಂಪ್ಲೇಂಟು ಕೊಟ್ಟು, ಆ ಸಂಗತಿ ನಮಗೂ ತಿಳಿಸಬೇಕಾಗಿ ಕೋರಲಾಗಿದೆ.

ಚಂದಮಾಮ ಪಬ್ಲಿಕೇಷನ್ಸ್,
ವಡಪಳನಿ.... ಮದ್ರಾಸ್-26.

# ಚಂದಮಾಮ

ಸಂಚಾಲಕರು:
'ಚಕ್ರಪಾಣಿ'

ಹೇಡಿಯೂ ಸೋಮಾರಿಯೂ ಆದ ಹುಡುಗರಿಗೆ ಪಾಠವೂ, ಪರೀಕ್ಷೆಯೂ ಎಂದರೆ ಭಯ. ಧೀರರಿಗೆ ಭಯವಿಲ್ಲ. ಅವರು ಪರೀಕ್ಷೆಯನ್ನು ಸಾಧಾರಣ ಪಾಠಗಳಂತೆಯೇ ಸ್ವಾಗತಿಸುತ್ತಾರೆ; ಸೋತರೂ ಕುಗ್ಗಿಹೋಗುವುದಿಲ್ಲ. ನಿರ್ವಂಚನೆಯಿಂದ ಕಲಿತುದನ್ನು ಒಪ್ಪಿಸುವ ಪರೀಕ್ಷೆಗೆ ಭಯವೇಕೆ? ಕೆಲವುವೇಳೆ ಭಯದಿಂದ ಕಲಿತದ್ದೂ ಸಮಯಕ್ಕೆ ಮರೆತುಹೋಗುವುದುಂಟು. ಆದುದರಿಂದ ನೀವೆಲ್ಲಾ ಅರ್ಜುನನಂತೆ ಧೈರ್ಯಶಾಲಿಗಳಾಗಿರಿ. ಅವನು ಸ್ವಯಂವರ ಪರೀಕ್ಷೆಯಲ್ಲಿ ದ್ರೌಪದಿಯನ್ನು ಗೆಲ್ಲಲಿಲ್ಲವೇ? 'ಸಕ್ಕರೆ ಮೂಟೆಗಳು' ಕತೆಯ ಷೇಕ್‌ಫರೀದನಂತೆ ಕರ್ತವ್ಯದಕ್ಷರಾಗಿರಿ. ಅವನಿಗೆ ದೇವರೊಲಿದಂತೆ ನಿಮಗೂ ಕಾರ್ಯಸಿದ್ಧಿಯಾಗುವುದು. ಅಂಜಿಕೆಯೇ ಅಪಜಯ. ಧೈರ್ಯವೇ ಜೀವನದಾರಿ.

ಸಂಪುಟ : ಅಕ್ಟೋಬರ್ ೧೯೫೩ : ಸಂಚಿಕೆ
೧೧ ೪



# ನರನೂ-ನಾಗವೂ

ಪಾಪ, ಆಯುಷ್ಯ ತೀರಿದ್ದ ಹಾವೊಂದು
ಮನುಜನೊಬ್ಬನ ಕೆಟ್ಟ ಕಣ್ಗೆ ಬಿತ್ತು.
ಆ ಮನುಜ ಅದ ಹಿಡಿದು ಚೀಲದಲಿ ಕಟ್ಟಿ
ಹಿಗ್ಗುತೆಂದನು 'ಅಹಾ! ಎಂಥ ಗೆಲುವಾಯ್ತು!

ಕೋರೆಯಲಿ ವಿಷವುಳ್ಳ ಕ್ರೂರನಾಗವಿದು!
ಹಾಲೆರೆದರೂ ವಿಷದ ಕಾರ್ವ ಘೋರ!
ಬಲು ಕೃತಘ್ನವಿದನ್ನು ಕೊಂದರಾಗೆನ್ನ
ಜನರೆಲ್ಲ ಪೊಗಳುವರು—'ಬಹಳ ಧೀರ'!






ಕೇಳುತಿದ ಕಡೆಸಾರಿ ನಾಗ ಭುಸ್ಸೆಂದು
ಹೇಳಿ "ತೆಲಿ ನರನೆ, ಪಾಪಂ ಶಾಂತಶಾಂತ!
ಎನಗಿರುವುದಲ್ಪ ವಿಷ. ನರನ ಮೈಪೂರ
ಮನಪೂರ–ಕೃತಿಪೂರ–ವಿಷವೆ, ಘಾತ!"

ಇದಕೇಳಿ ನರನೆಂದ, "ಈ ನಿನ್ನ ಮಾತ
ರುಜುಗೊಳಿಸಿದಾಗಲೇ ನಿನ್ನ ಕೊಲುವೆ"
'ಸರಿ'ಯೆಂದಿತಾ ಹಾವು ಮುಂದೆ ನಡೆದಾಗ
ಅಲ್ಲಿ ನಿಂತಿತ್ತೊಂದು ಗೋವು ಚೆಲುವೆ.

ಆ ಗೋವಿನಾ ಮುಂದೆ ಕೇಳಲೀಪ್ರಶ್ನೆ
ಗೋವೆಂದಿ "ತಬ್ಬಬ್ಬ! ನರನೆ ಕ್ರೂರ!
ನನ್ನ ಕರುವಿನ ಬಾಯಕಟ್ಟಿ ಹಾಲ್ಗುಡಿವ,
ನರನ ನಂಜಿಗೆ ತುಲ್ಯವುಂಟೆ?—ಘೋರ!






“ನವಗಿರಿನಂದ”

ಪ್ರಾಣಿಗಳ ಜ್ಞಾನವಿಷ್ಟೇ ಎಂದು ಮನುಜ
ಕೇಳಿದನು ಬಳಿಯಲಿದ್ದೊಂದು ಮರವ.
ಹೇಳಿತದು “ ನರನು ಹೂಚಿಗುರು ಕಾಯಿಗಳ
ದೋಚಿ ಕಡೆಗಾ ಮರವ ಒಲೆಗೊಟ್ಟುವ!”

ಹೂಂಕರಿಸಿ ಮನುಜ ಚೀಲವನು ಹಿಡಿದೆತ್ತಿ
ಸಿಟ್ಟಿನಿಂದಾ ಮರಕ್ಕಪ್ಪಳಿಸಿ ಹೊಡೆದು
ಸರ್ಪವನು ಕೊಂದಿಕ್ಕಿ ನಡೆದ ಗೆಲುವಿಂದೆ.
ಅಪ್ರಿಯದ ಸತ್ಯ ಕೇಳುವರೆ ಕಿವಿಯೊಲಿದು?

ಮುದುಕಿಯಾದೊಡೆಯೆನ್ನ ಕಡೆಗಣಿಪ ನರನು
ಎಂಥ ವಿಷ ಸರ್ಪವನೆ ಮಿಂಚುವಾತ!”
ಎಂದ ನುಡಿ ಕೇಳಿ ನರ “ ಛೀ ತಪ್ಪಿದೆಲ್ಲಾ
ನಾನೊಪ್ಪೆ ಇದು ಬರಿಯ ಪಕ್ಷಪಾತ”

ಎಂದು ಮುಂದಕೆ ನಡೆದು, ಎತ್ತೊಂದ ಕಂಡು
“ ನೀ ಹೇಳು ಈ ಸಮಸ್ಯೆಯ ನೀತಿಯ”
ಕೇಳಿ ಎಲ್ಲಾ ಮಾತು ಹೇಳಿತಾ ಎತ್ತು:
“ ಸತ್ಯವನೆ ನುಡಿದ ರಾಮೋದಿಸುವೆಯಾ?

ಕೇಳಯ್ಯ, ನರನು ಬಾಳೆಲ್ಲ ಹಿಡಿದೆಮ್ಮ
ಹೊಲವ ನುತ್ತಿಸಿ, ಭಾರಬಂಡಿ ಎಳೆಸಿ,
ವಿಧವಿಧದ ಕೆಲಸ ಮಾಡಿಸಿ ನಮ್ಮ ದಣಿಸಿ
ಮುದಿಯಾಗೆ ಕೊಲ್ಲುವನು ಕಟುಕಗಿಡಿಸಿ!”



# ಮುಖಚಿತ್ರ

ಪಾಂಚಾಲ ದೇಶಾಧೀಶನಾದ ದ್ರುಪದನು, ಅರ್ಜುನನಿಗಾಗಿ ಮಗಳು ದ್ರೌಪದಿಯನ್ನು ಪಡೆದಿದ್ದನಷ್ಟೆ? ಪಾಂಡವರು ಲಾಕ್ಷಾಗೃಹದಲ್ಲಿ ಸುಟ್ಟುಹೋದ ವಾರ್ತೆಯನ್ನು ಕೇಳಿ ಅವನು ತುಂಬಾ ವ್ಯಸನಪಟ್ಟನು. ಈಗ ದ್ರೌಪದಿಗೆ ಪ್ರಾಪ್ತ ವಯಸ್ಸಾಗಿತ್ತು. ಅವಳನ್ನು ಅರ್ಜುನನಂತಹ ವೀರನಿಗೇ ಕೊಡಬೇಕೆಂದು ಬಗೆದು ದ್ರುಪದನು, ಒಂದು ಪಂದ್ಯವನ್ನೇರ್ಪಡಿಸಿದನು. ಆಕಾಶದಲ್ಲೊಂದು ಮತ್ಸ್ಯಯಂತ್ರವನ್ನು ನಿರ್ಮಿಸಿದನು. ಎತ್ತಲಸಾಧ್ಯವಾದಂಥ ಒಂದು ಭಾರೀಬಿಲ್ಲನ್ನು ಕೆಳಗಿಟ್ಟನು. ಆ ಬಿಲ್ಲಿಗೆ ಬಾಣ ಹೂಡಿ ಮೇಲಿನ ಮತ್ಸ್ಯಯಂತ್ರವನ್ನು ಬೇಧಿಸುವವರಿಗೆ ದ್ರೌಪದಿಯನ್ನು ಕೊಟ್ಟು ಮದುವೆ ಮಾಡುವೆನೆಂದು ಡಂಗುರ ಸಾರಿದನು.

ಈ ಸ್ವಯಂವರಕ್ಕೆ ದೇಶದೇಶಗಳಿಂದಲೂ ರಾಜಾಧಿರಾಜರು ಆಗಮಿಸಿದರು. ಕರ್ಣ—ದುರ್ಯೋಧನಾದಿಗಳೂ ಬಂದಿದ್ದರು. ಬ್ರಾಹ್ಮಣ ಪರಿವಾರದೊಂದಿಗೆ ಸೇರಿಕೊಂಡು ಬ್ರಾಹ್ಮಣ ವೇಷದಲ್ಲಿ ಪಾಂಡವರೂ ಬಂದರು. ಕುಂತಿಯನ್ನು ಒಬ್ಬ ಕುಂಬಾರನ ಮನೆಯಲ್ಲಿ ಕೂಡಿಸಿ ಪಾಂಡವರೈವರೂ ಸ್ವಯಂವರಶಾಲೆಗೆ ಬಂದರು.

ದ್ರೌಪದಿಯ ಅಣ್ಣ ದೃಷ್ಟದ್ಯುಮ್ನನು ಸ್ವಯಂವರದ ಕ್ರಮವನ್ನು ಸಾರಿದನು. ಅನಂತರ ಒಬ್ಬೊಬ್ಬರೇ ವೀರಾಧಿ ವೀರರು ಆ ಮಹಾಧನುಸ್ಸಿನ ಬಳಿಗೆ ಬಂದರು. ಕೆಲವರು ಅರ್ಧ ಬಂದು ಹಿಂದೆ ಹೋದರು. ಕೆಲವರು ಬಿಲ್ಲನ್ನೆತ್ತಲಾರದೆ ತಲೆ ತಗ್ಗಿಸಿ ಸಾರಿದರು. ಕೆಲವರು ಹತಾಶರಾಗಿ ಎದ್ದು ಬರಲೇ ಇಲ್ಲ. ಕಡೆಗೆ ಬಿಲ್ಲನ್ನೆತ್ತಿ ಬಾಣಹೂಡಿ ತಬ್ಬಿಬ್ಬಾಗಿ ಗುರಿ ತಪ್ಪಿಹೋದುದು ಕರ್ಣನೊಬ್ಬನಿಗೆ! ಇನ್ನು ಕ್ಷತ್ರಿಯರಲ್ಲಿ ಆ ಯಂತ್ರವನ್ನು ಬೇಧಿಸುವ ವೀರರಾರೂ ಇಲ್ಲವೆಂದಾಯಿತು!

ಬ್ರಾಹ್ಮಣರಲ್ಲಿ ಯಾರಾದರೂ ವೀರರಿದ್ದರೆ ಬರಬಹುದೆಂದು ಸಾರಲಾಯಿತು. ಎಲ್ಲರೂ ಕೌತುಕದಿಂದ ನೋಡುತ್ತಿರಲು, ಬ್ರಾಹ್ಮಣ ವೇಷದ ಅರ್ಜುನನು ಮುಂದೆ ಬಂದನು. ನೋಡನೋಡುತ್ತಿರಲು ಬಿಲ್ಲನ್ನೆತ್ತಿ ಗುರಿ ಹಿಡಿದು ಬಾಣ ಬಿಟ್ಟೇಬಿಟ್ಟನು. ಮತ್ಸ್ಯಯಂತ್ರವು ಛೇದಿಸಿ ಹೋಯಿತು. ಬ್ರಾಹ್ಮಣರೆಲ್ಲ ಜಯಜಯಕಾರ ಮಾಡಿದರು. ಕೆಲವು ರಾಜರು ಇದು ಅನ್ಯಾಯವೆಂದು ಯುದ್ಧಕ್ಕೂ ನಿಂತರು. ಭೀಮಾರ್ಜುನರ ಮುಂದೆ ಅವರೆಲ್ಲ ಪರಾಜಿತರಾಗಿ ಹೋದರು. ದ್ರುಪದರಾಯನು ಆನಂದಭರಿತನಾಗಿ ದ್ರೌಪದಿಯನ್ನು ಅರ್ಜುನನ ಮುಂದೆ ನಿಲ್ಲಿಸಿದನು. ದ್ರೌಪದಿ ಅರ್ಜುನನ ಕೊರಳಿಗೆ ಮಾಲೆ ಹಾಕಿದಳು. ಅರ್ಜುನನು ಧರ್ಮ-ಭೀಮಾದಿಗಳೊಂದಿಗೆ ದ್ರೌಪದಿಯನ್ನು ಕರೆದುಕೊಂಡು ತಾಯಿಯ ದರ್ಶನಕ್ಕೆ ನಡೆದನು.



# ಕೃತಜ್ಞತೆ

ಬ್ರಹ್ಮದತ್ತನು ಕಾಶೀ ನಗರವನ್ನು ಆಳುತ್ತಿರುವಾಗ ಬೋಧಿಸತ್ವನು ಸುಂದರವಾದ ಕರಿ ಹೋರಿಯ ಜನ್ಮ ತಾಳಿದನು. ಆ ಹೋರಿ ಕರ್ರಗಿದ್ದರೂ ನೋಡಲು ತುಂಬಾ ಮುದ್ದಾಗಿತ್ತು. ಅದನ್ನು ಕಂಡರೆ ಅದರ ಯಜಮಾನನಿಗೆ ತುಂಬಾ ಆನಂದ.

ಆ ಹೋರಿಯ ಯಜಮಾನ ಒಬ್ಬ ಅಡುಗೂಲ ಅಜ್ಜಿಯ ಮನೆಯಲ್ಲಿ ಬಾಡಿಗೆಗೆ ಇದ್ದ. ಆದರೆ ಕೆಲವು ದಿನಗಳಾದ ನಂತರ ಆತ ಆ ಊರು ಬಿಟ್ಟು ಹೋಗ ಬೇಕಾಗಿ ಬಂತು. ಹಾಗೆ ಹೋಗುವಾಗ ಆ ಅಜ್ಜಿಗೆ ಬಾಡಿಗೆಗೆ ಬದಲು ಆ ಹೋರಿಯನ್ನು ಕೊಟ್ಟುಬಿಟ್ಟ. ಆಕೆಗೆ ಮಕ್ಕಳಿರಲಿಲ್ಲ. ಆ ಹೋರಿಯನ್ನು ತನ್ನ ಮಗುವಿನಂತೆ ನೋಡಿಕೊಳ್ಳುತ್ತಾ ಅತಿ ಮಮತೆಯಿಂದ ಸಲಹುತ್ತಿದ್ದಳು.

ಸೊಗಸಾದ ಕಲಗಚ್ಚು ತಯಾರುಮಾಡಿ ಎತ್ತಿಗೆ ಕುಡಿಸುವಳು ಅಜ್ಜಿ. ಅದರ ಮೈಯನ್ನು ತಿಕ್ಕಿ ಶುಭ್ರವಾಗಿ ಸ್ನಾನ ಮಾಡಿಸುವಳು. ಆ ಹೋರಿಯನ್ನು ಎಂದೂ ಗೂಟಕ್ಕೆ ಕಟ್ಟಿಹಾಕುತ್ತಿರಲಿಲ್ಲ. ಹೋರಿಗೆ ವಯಸ್ಸು ಬಂದಂತೆ ಅದಕ್ಕೆ ಸುಂದರವಾದ ಸಣ್ಣ ಸಣ್ಣ ಕೊಂಬುಗಳು ಕಾಣಿಸಿಕೊಂಡವು. ಆ ಹೋರಿ ಜೊತೆ ಪಶುಗಳೊಂದಿಗೆ ಸ್ವೇಚ್ಛೆಯಾಗಿ ಊರೆಲ್ಲಾ ಸುತ್ತಾಡುತ್ತಿರುವುದು. ಮಕ್ಕಳು ನಿರ್ಭೀತಿಯಿಂದ ಅದರ ಮೇಲೆ ಹತ್ತಿ ಸವಾರಿ ಮಾಡುವರು. ಅದರ ಗಂಗೆದೊಗಲು ತಡವಿ ಅದರೊಂದಿಗೆ ಆಟ ವಾಡುವರು.

ಒಂದುದಿನ ಆ ಹೋರಿ ಹೀಗೆ ಯೋಚಿಸಿತು. "ನನ್ನನ್ನು ಸಾಕುತ್ತಿರುವ ಅಜ್ಜಿಯು ಕಡು ಬಡವಳು. ನನಗಾಗಿ ತುಂಬಾ ಕಷ್ಟ ಪಡುತ್ತಿದ್ದಾಳೆ. ನಾನು ಸ್ವಲ್ಪ ಹಣ ಸಂಪಾದಿಸಿ, ಆಕೆಯ ಕಷ್ಟವನ್ನು ಕೆಲಮಟ್ಟಿಗಾದರೂ ಪರಿಹಾರ ಮಾಡಬೇಕು" ಈ ಆಲೋಚನೆ ಬಂದಲಾಗಾಯ್ತು ಅದು ಧನ ಸಂಪಾದನೆ ಮಾಡುವ ಅವಕಾಶಕ್ಕೆ ಎದುರು ನೋಡುತ್ತಿತ್ತು.

ಯಚ್. ನಾರಾಯಣರಾವ್




ಹೀಗಿರುವಾಗ ಆ ಊರಿಗೆ ಐನೂರು ಗಾಡಿಗಳಲ್ಲಿ ಧಾನ್ಯ ತುಂಬಿಸಿಕೊಂಡು ಒಬ್ಬ ವರ್ತಕ ಬಂದ. ಆ ಗಾಡಿಗಳೆಲ್ಲಾ ಒಳಹಾದಿಯಲ್ಲಿ ಸುಗಮವಾಗಿ ಬಂದವು. ಆದರೆ ಮಧ್ಯದಲ್ಲಿ ಒಂದು ಸಣ್ಣ ಹೊಳೆ ದಾಟಬೇಕಾಗಿ ಬಂತು. ಆ ಹೊಳೆಯ ಪಾತ್ರವೆಲ್ಲಾ ಮರಳುಮಯ.

ಎಷ್ಟು ಪ್ರಯತ್ನಮಾಡಿದರೂ ಆ ಮರಳಿನಲ್ಲಿ ವರ್ತಕನ ಎತ್ತುಗಳಲ್ಲಿ ಒಂದಾದರೂ ಗಾಡಿಯನ್ನು ಎಳೆಯದಾದುವು. ಗಾಡಿಗಳೆಲ್ಲಾ ಹೊಳೆಯ ದಡದಲ್ಲಿ ನಿಂತು ಹೋದವು. ಬೇರೆ ಎತ್ತುಗಳನ್ನು ತರಿಸಿ, ಎಳೆಯಿಸಿ ನೋಡಿದರು. ಆದರೂ ಲಾಭವಿಲ್ಲವಾಯಿತು.

ಆ ಸಮಯದಲ್ಲಿ ಬೋಧಿಸತ್ವನಾದ ಹೋರಿ ಹೊಳೆಯ ಆಚೆ ದಡದಲ್ಲಿ ಜೊತೆ ಪಶುಗಳೊಂದಿಗೆ ಮೇಯುತ್ತಿತ್ತು. ಮೇಯುತ್ತಿದ್ದ ಪಶುಗಳಲ್ಲಿ ತನಗೆ ಉಪಯೋಗವಾಗುವ ಎತ್ತು ಯಾವುದಾದರೂ ಸಿಗುವುದೇನೊ ಎಂದು ವರ್ತಕ ಅಲ್ಲಿಗೆ ಬಂದ.

ಆತನಿಗೆ ಪುಷ್ಟವಾದ ಆ ಕರಿ ಹೋರಿ ಕಾಣಿಸಿತು. "ಈ ಎತ್ತು ಅಸಾಧಾರಣವಾಗಿ ಕಾಣಿಸುತ್ತಿದೆ. ಒಳ್ಳೇಬಲಿಷ್ಠವಾಗಿದೆ. ಇದರ ಸಹಾಯದಿಂದ ಗಾಡಿಗಳನ್ನು ಸುಲಭವಾಗಿ ಹೊಳೆ ದಾಟಿಸಬಹುದು" ಎಂದು ಆತನ ಮನಸ್ಸಿಗೆ ತೋರಿತು.

ಕೂಡಲೇ ಅಲ್ಲಿದ್ದ ಪಶುಪಾಲಕರನ್ನು ಕುರಿತು "ಏನು ತಮ್ಮಾ, ಈ ಹೋರಿ ಯಾರದು? ಅದನ್ನು ಸ್ವಲ್ಪ ಹೊತ್ತು ಎರವಲು ಕೊಡುವಿರಾ? ನನ್ನ ಗಾಡಿಗಳನ್ನು ಹೊಳೆ ದಾಟಿಸಬೇಕು. ಕೇಳಿದಷ್ಟು ಹಣ ಕೊಡುತ್ತೇನೆ" ಎಂದ.

ಆಗ ಒಬ್ಬ ಹುಡುಗನು "ಹೊಡೆದುಕೊಂಡು ಹೋಗಿ ಸ್ವಾಮಿ. ಇದರ ಯಜಮಾನಿ ಏನೂ ಹೇಳೋಲ್ಲ" ಎಂದ.

ವರ್ತಕ ಅದರ ಮೂಗಿಗೆ ದಾರ ಹಾಕಿ ಎಳೆದುಕೊಂಡು ಹೋಗಲು ಪ್ರಯತ್ನಿಸಿದ. ಆದರೆ ಕರಿಹೋರಿ ಸ್ವಲ್ಪವಾದರೂ ಕದಲಲಿಲ್ಲ. ಅದನ್ನು ಅಲ್ಲಿಂದ ಕದಲಿಸಲೂ ಸಹ ಯಾರಿಂದಲೂ ಸಾಧ್ಯವಾಗಲಿಲ್ಲ.

ಆಗ ಆ ವರ್ತಕನು ಎತ್ತನ್ನು ಅರ್ಥಮಾಡಿಕೊಂಡ. ತನ್ನ ಕಷ್ಟಕ್ಕೆ ಉಚಿತ ಸಂಭಾವನೆ ಬೇಕೆಂದು ಈ ಹೋರಿ ಅಪೇಕ್ಷಿಸುವಂತಿದೆ

ಎಂದೆಣಿಸಿ ಹೀಗೆಂದ: "ವೃಷಭ ರಾಜನೇ, ನನ್ನ 500 ಗಾಡಿಗಳನ್ನು ಹೊಳೆ ದಾಟಿಸಿದರೆ ಒಂದೊಂದು ಗಾಡಿಗೂ ಎರಡೆರಡು ವರಹ ಗಳನ್ನು ಕೊಡುವೆನು"

ವರ್ತಕನ ಮಾತು ಕೇಳಿದ ಕೂಡಲೇ ಆ ಎತ್ತು ಉತ್ಸಾಹದಿಂದ ನೆಗೆಯುತ್ತಾ ಆತನ ಗಾಡಿಗಳಿದ್ದ ಸ್ಥಳಕ್ಕೆ ಹೋಗಿ ನಿಂತುಕೊಂಡಿತು. ಆ ಹೋರಿಯನ್ನು ಒಂದು ಗಾಡಿಗೆ ಹೂಡಿದರು. ಕ್ಷಣಮಾತ್ರದಲ್ಲಿ ಆ ಗಾಡಿಯನ್ನು ಆಚೆ ದಡಕ್ಕೆ ಸೇರಿಸಿತು.

ಇದೇ ರೀತಿ ಐನೂರು ಗಾಡಿಗಳನ್ನೂ ಸುಲಭವಾಗಿ ಆಚೆದಡ ಮುಟ್ಟಿಸಿತು ಆ ಹೋರಿ.

ವರ್ತಕನ ಸಂತೋಷಕ್ಕೆ ಪಾರವೇ ಇಲ್ಲ. ಕೂಡಲೇ ಒಂದು ಉದ್ದವಾದ ಚೀಲದಲ್ಲಿ ಐನೂರು ವರಹಗಳನ್ನು ಇಟ್ಟು ಆ ಚೀಲವನ್ನು ಕರಿಹೋರಿಯ ಕೊರಳಿಗೆ ಕಟ್ಟಿದ.

ಆಗ ಬೋಧಿಸತ್ವನು ಈ ರೀತಿ ಯೋಚಿಸಿದ: "ಈ ವರ್ತಕನಿಗೆ ದುರ್ಬುದ್ಧಿಯುಂಟಾಗಿದೆ. ಕೊಟ್ಟಮಾತು ತಪ್ಪಿದ್ದಾನೆ. ಇವನಿಗೆ ಪಾಠ ಕಲಿಸಬೇಕು" ಎಂದುಕೊಂಡು, ಮೊದಲನೆಯ ಗಾಡಿಯ ಮುಂದೆ ನಿಂತು ಅಟಕಾಯಿಸಿತು. ಯಾರಿಂದಲೂ ಅದನ್ನು ಅಲ್ಲಿಂದ ದೂಡಲು ಸಾಧ್ಯವಾಗಲಿಲ್ಲ.

"ಬಾಯಿಯಿಲ್ಲದ ಜಂತುವಾದರೂ ತಿಳುವಳಿಕೆಯುಳ್ಳ ಪ್ರಾಣಿ ಈ ಹೋರಿ. ನಾನು ಆಡಿದ ಮಾತಿಗೆ ತಪ್ಪಿರುವುದನ್ನು ಗ್ರಹಿಸಿದೆ" ಎಂದುಕೊಂಡ ವರ್ತಕ.




ಕೂಡಲೇ 500 ವರಹಗಳನ್ನು ಬೇರೊಂದು ಚೀಲದಲ್ಲಿ ಹಾಕಿ ಆ ಹೋರಿಯ ಕೊರಳಿಗೆ ಕಟ್ಟಿಸಿ "ವೃಷಭರಾಜ, ನಾನು ವಾಗ್ದಾನ ಮಾಡಿದಂತೆ ಸಾವಿರ ವರಹಗಳನ್ನು ಕೊಟ್ಟಿರುವೆನು" ಎಂದು ಗಟ್ಟಿಯಾಗಿ ನುಡಿದ.

ಕೂಡಲೇ ಆ ಹೋರಿ ಅಜ್ಜಿಯ ಹತ್ತಿರಕ್ಕೆ ಓಡಿತು. ಹಾಗೆ ಓಡುತ್ತಿರುವಾಗ ಆಗುತ್ತಿದ್ದ ಗಲಗಲ ನಿನಾದ ಕೇಳಲು ಇಂಪಾಗಿತ್ತು.

ಆ ಕರಿಹೋರಿ ಓಡುತ್ತಿದ್ದರೆ ಅದರ ಕೊರಳಲ್ಲಿದ್ದ ಚೀಲಗಳೂ,ಅವು ಮಾಡುತ್ತಿದ್ದ ಶಬ್ದವೂ ಸಣ್ಣ ಸಣ್ಣ ಮಕ್ಕಳಿಗೆ ಕೌತುಕವನ್ನುಂಟು ಮಾಡಿದವು. ಯಥಾಪ್ರಕಾರ ಅದರೊಂದಿಗೆ ಆಡಿಕೊಳ್ಳಲು ಅವರು ಅದರ ಹತ್ತಿರಕ್ಕೆ

ಹೋದರು. ಆದರೆ ಆ ಎತ್ತು ಅವರನ್ನು ಹತ್ತಿರ ಸೇರಿಸಲಿಲ್ಲ.

ಅದೀಗ ತನ್ನ ತಾಯಿಯಾಡ ಅಜ್ಜಿಯ ಹತ್ತಿರ ಸೇರಲು ಆತುರ ಪಡುತ್ತಿದೆ. ಆದು ದರಿಂದ ಅದು ತನ್ನೊಂದಿಗೆ ದಿನಾ ಆಟ ವಾಡುತ್ತಿದ್ದ ಮಕ್ಕಳನ್ನು ತಪ್ಪಿಸಿಕೊಂಡು ತನ್ನ ತಾಯಿಯ ಮುಂದೆ ಹೋಗಿ ನಿಂತು ಕೊಂಡಿತು.

ಒಂದೇ, ಎರಡೇ, ಐನೂರು ಗಾಡಿಗಳನ್ನು ಒಂದೇ ಸವನೆ ಎಳೆದು ಮರಳು ಹಾದಿ ದಾಟಿಸಿ ಆ ಕರಿಹೋರಿ ತುಂಬಾ ಸೋತು ಹೋಗಿತ್ತು. ಅದರ ಕಣ್ಣುಗಳು ಕೆಂಡದಂತೆ ಕೆಂಪಾಗಿವೆ.

ಹೀಗೆ ಬಳಲಿ ಬಂದ ಹೋರಿಯನ್ನು ನೋಡಿದ ಕೂಡಲೇ ಅಜ್ಜಿ ಅದನ್ನು ಹತ್ತಿರ ಕರೆದುಕೊಂಡು, ತಲೆ ನೇವರಿಸಿ, ಅದರ ಆಯಾಸ ತೀರಿಸುತ್ತಿದ್ದಳು. ಆಕೆ ಅದರ ಕೊರಳು ನೀವುತ್ತಿರುವಾಗ ಚೀಲಗಳೆರಡು ಆಕೆಗೆ ಕಾಣಿಸಿದುವು.

ಅದನ್ನು ನೋಡಿ ಅಜ್ಜಿ "ಎವೆಲ್ಲಾ ಎಲ್ಲಿ ಯವೇ ನನ್ನ ಚಿನ್ನಾ" ಎಂದು ಆಶ್ಚರ್ಯ ಪಡುತ್ತಿರಲು, ಅಲ್ಲಿಗೆ ಪಶುಪಾಲಕರು ಬಂದು ಎಲ್ಲ ವಿಷಯವನ್ನು ತಿಳಿಸಿದರು.

ಆಗ ದುಃಖವೂ ಆನಂದವೂ ಸೇರಿ ಆಕೆಯ ಕಣ್ಣುಗಳಿಂದ ನೀರು ಮಿಡಿಯಿತು.

"ನನಗಾಗಿ ಎಷ್ಟು ತೊಂದರೆ ತೆಗೆದು ಕೊಂಡೆ ಮಗೂ. ಏಕೆ ಈ ಹಣ? ನಾನೇನು ಮಾಡಿ ಕೊಳ್ಳುವೆನು? ನೀನು ಸುಖವಾಗಿ ನನ್ನ ಕಣ್ಣುಮುಂದೆ ಓಡಾಡಿಕೊಂಡಿದ್ದರೆ ಸಾಕು. ಬಾ, ಮಗೂ ಬಾ" ಎಂದು ಆದರ ದಿಂದ ಆ ಹೋರಿಗೆ ಮೈ ನೋವು ಪರಿಹಾರ ವಾಗುವಂತೆ ಎಣ್ಣೆ ಹಾಕಿ ನೀವಿ, ಬಿಸಿ ಬಿಸಿ ನೀರಿನಿಂದ ಸ್ನಾನ ಮಾಡಿಸಿದಳು. ಬಿಸಿಗಂಜಿ ತಯಾರು ಮಾಡಿ ಕುಡಿಸಿದಳು. ಇನ್ನು ಅನೇಕ ಉಪಚಾರಗಳನ್ನು ಮಾಡಿದಳು.

ಈ ರೀತಿ ಬೋಧಿಸತ್ವನು ತಾಯಿಯ ಋಣವನ್ನು ತೀರಿಸಿ ಕೆಲಕಾಲವಾದ ಮೇಲೆ ಹೋರಿಯ ಜನ್ಮವನ್ನು ಮುಗಿಸಿದನು.






[ಭೀಮವರ್ಮನು ಬಿಡಾರ ಹಾಕಿದ್ದ ದೇವಪುರದಲ್ಲಿ ಕರುಣಳನ್ನು ಬಲವಂತವಾಗಿ ಯಾರಿಗೋ ಕೊಟ್ಟು ವಿವಾಹ ಮಾಡಲು ನಿಶ್ಚಯಿಸಿದ್ದ. ಈ ರಹಸ್ಯ ಕೇಳಿದ ವಿಜಯವರ್ಮ ಚಂದ್ರದುರ್ಗಾಧಿಪತಿಯೊಂದಿಗೆ ಸೇರಿ ಭೀಮವರ್ಮನು ವಾಸಮಾಡುತ್ತಿದ್ದ ಭವನದಮೇಲೆ ಧಾಳಿಮಾಡಿದ. ಆದರೆ ಆ ಧಾಳಿ ವಿಫಲವಾಯಿತು. ಚಂದ್ರದುರ್ಗಾಧಿಪತಿ ಗಾಯಗೊಂಡ. ವಿಜಯವರ್ಮ ಮತ್ತೆ ತನ್ನ ನಿವಾಸ ಸೇರಿದ.]

ವಿಜಯವರ್ಮನು ತನ್ನ ಅನುಚರರೆಲ್ಲರನ್ನೂ ಆ ಪಾಳುಬಿದ್ದಿದ್ದ ಸತ್ರದಲ್ಲಿ ಗುಂಪು ಸೇರಿಸಿದ. ಅವರೆಲ್ಲ ಕರುಣಳನ್ನು ಭೀಮವರ್ಮನ ಸೆರೆಯಿಂದ ಬಿಡಿಸುವ ಮಾರ್ಗವನ್ನು ಯೋಚಿಸುತ್ತಿದ್ದರು.

ಭೀಮವರ್ಮನು ಕರುಣಳನ್ನು ಯಾರಿಗೋ ಕೊಟ್ಟು, ರಹಸ್ಯವಾಗಿ ವಿವಾಹ ಮಾಡಲಿರುವನೆಂಬ ವಿಷಯ ಅವರಿಗೆ ತಿಳಿದಿದೆ. ಈ ಬಲವಂತದ ಮದುವೆಯನ್ನು ಒಪ್ಪುತ್ತಿರುವವನು ಯಾರು? ಎಂಬುದು ಅವರಿಗೆ ತಿಳಿಯದು. "ಅವನು ಯಾರೋ ತಿಳಿದುಕೊಳ್ಳಬೇಕಾದರೆ ನಾವಿಲ್ಲಿ ಕುಳಿತು ಚರ್ಚಿಸುವುದರಿಂದ ಪ್ರಯೋಜನವಿಲ್ಲ. ಸೀದಾ ಭೀಮವರ್ಮನು ತಂಗಿರುವ ಭವನಕ್ಕೆ ಹೋಗಬೇಕು. ಅದರ ಹೊರತು ಬೇರೇ ಮಾರ್ಗವೇ ಇಲ್ಲ" ಎಂದ ಅಂಬಿಗ ಅಣ್ಣಯ್ಯ.

"ಭೇಷ್, ಭೇಷ್, ಅಣ್ಣಯ್ಯಾ ನೀನು ಬೃಹಸ್ಪತಿ ಕಣಯ್ಯಾ" ಎಂದ ಅವರಲ್ಲೊಬ್ಬ.

"ಸೊಗಸಾಗಿದೆ ಯೋಚನೆ. ಆದರೆ ಬೆಕ್ಕಿಗೆ ಗಂಟೆ ಕಟ್ಟುವವರು ಯಾರು?" ಎಂದ ವಿಜಯವರ್ಮ.

"ಇನ್ನು ಯಾರು, ನಾವಿಬ್ಬರೇ. ನಡೀ ಹೋಗೋಣ" ಎಂದು ಎದ್ದು ನಿಂತ ಅಂಬಿಗ ಅಣ್ಣಯ್ಯ.



ವಿಜಯವರ್ಮನು ತನ್ನ ಅನುಚರರಿಗೆ ಜಾಗ್ರತೆಯಾಗಿ ನಡೆದುಕೊಳ್ಳುವಂತೆ ಎಚ್ಚರಿಕೆ ಕೊಟ್ಟು ಅಣ್ಣಯ್ಯನೊಂದಿಗೆ ಹೊರಟ. ಅಣ್ಣಯ್ಯ ನೆಟ್ಟಗೆ ಒಂದು ಅರಣ್ಯದ ಹಾದಿ ಹಿಡಿದ. ಸ್ವಲ್ಪ ದೂರ ಕಾಲು ಹಾದಿಯಲ್ಲಿ ಹೋದ ಮೇಲೆ ಅಣ್ಣಯ್ಯ ಆ ದಾರಿ ತಪ್ಪಿಸಿ, ವಿಜಯವರ್ಮನನ್ನು ದಟ್ಟವಾಗಿ ಹಬ್ಬಿದ್ದ ಗಿಡಗಳ ಮಧ್ಯೆ ಕರೆದುಕೊಂಡು ಹೋದ.

ನಡು ಹಗಲಲ್ಲೇ ಗಾಢಾಂಧಕಾರವಾಗಿದ್ದ ಆ ಮರಗಳ ಮಧ್ಯೆ ಇದ್ದ ತನ್ನ ನಿವಾಸವನ್ನು ಅಣ್ಣಯ್ಯ ವಿಜಯವರ್ಮನಿಗೆ ತೋರಿಸಿದ. ಒತ್ತೊತ್ತಾಗಿ ಹೊಸೆದುಕೊಂಡಿರುವ ಕಾಡು ಬಳ್ಳಿಗಳ ನಡುವೆ ಕೆಲವು ಒಣಗಿದ ಕೊಂಬೆಗಳನ್ನು ನೆಟ್ಟು, ಅವುಗಳಮೇಲೆ ಚಾಪೆಯನ್ನು ಹರಡಿ ಒಂದು ಸಣ್ಣ ಕೊಠಡಿಯನ್ನು ಸಿದ್ಧಪಡಿಸಿದ ಅಣ್ಣಯ್ಯ.

"ಇದೇ ನನ್ನಮನೆ. ಚೆನ್ನಾಗಿದೆಯೆ?" ಎಂದು ಕೇಳಿದ ವಿಜಯವರ್ಮನನ್ನು.

"ನಾನು ನಿನ್ನ ಮನೆಯನ್ನು ನೋಡಲಿಕ್ಕೆ ಬರಲಿಲ್ಲ. ಕರುಣಳನ್ನು ಬಿಡಿಸುವ ಮಾರ್ಗ ಯೋಚಿಸಬೇಕು. ನೀನು ಯೋಚಿಸಿರುವ ಉಪಾಯವೇನೋ ಮೊದಲು ಹೇಳು" ಎಂದು ಗಂಭೀರವಾಗಿ ನುಡಿದ. ಅಣ್ಣಯ್ಯ ನಗುತ್ತಾ ಕೆಳಗೆಬಿದ್ದಿದ್ದ ಹರಕು ಚಾಪೆಗಳಡಿಯಿಂದ ಕೆಲವು ಹಳೇಬಟ್ಟೆಗಳನ್ನು ಹೊರತೆಗೆದ.

ಅನುಮಾನದಿಂದ ನೋಡುತ್ತಿದ್ದ ವಿಜಯನಿಗೆ ಅವುಗಳನ್ನು ತೋರಿಸಿ "ನಾವು ಭೀಮವರ್ಮನ ಭವನದೊಳಕ್ಕೆ ಹೋಗಬೇಕೆಂದರೆ ಮಾರು ವೇಷದಿಂದಲೇ ಹೋಗಬೇಕು. ಸನ್ಯಾಸಿಯ ವೇಷ ತುಂಬಾ ಸುಲಭವಾಗಿರುತ್ತದೆ. ನಮಗೆ ಬೇಕಾದ ಜಾಗಕ್ಕೆ ಹೋಗಲು ಆ ವೇಷ ಸಹಾಯಕರವಾಗಿರುತ್ತದೆ" ಎಂದ ಅಣ್ಣಯ್ಯ.

ಈ ಉಪಾಯ ವಿಜಯವರ್ಮನಿಗೆ ಸರಿ ತೋರಿತು. ಅಣ್ಣಯ್ಯ ತನ್ನ ವೇಷವನ್ನು ನಿಮಿಷಮಾತ್ರದಲ್ಲಿ ಬದಲಾಯಿಸಿದ. ಕಾಷಾಯ ವಸ್ತ್ರಧರಿಸಿ, ಕೊರಳಲ್ಲಿ ರುದ್ರಾಕ್ಷಿ ಸರ, ಕೈಯಲ್ಲಿ ಕಮಂಡಲು ಹಿಡಿದಿದ್ದ ಅಣ್ಣಯ್ಯನನ್ನು ನೋಡಿದರೆ ಈಗಲೇ ಆತನು ಹಿಮಾಲಯದಿಂದ ಬಂದ ಯತೀಶ್ವರನಂತೆ ಕಾಣುತ್ತಿದ್ದ.

ವಿಜಯನಿಗೂ ಸನ್ಯಾಸಿಯ ವೇಷ ಸರಿ ಹೋಯಿತು. ಸನ್ಯಾಸಿಯ ವೇಷದಲ್ಲಿದ್ದ ಅವರಿಬ್ಬರೂ ಒಬ್ಬರನ್ನೊಬ್ಬರು ನೋಡಿಕೊಂಡು ನಸು ನಕ್ಕರು.

"ಜೈಸೀತಾ ರಾಂ" ಎಂದ ಅಣ್ಣಯ್ಯ. "ಜೈ ಸೀತಾ ರಾಂ" ಪುನರುಚ್ಚರಿಸಿದ ವಿಜಯ.

"ಯಾವುದಕ್ಕಾದರೂ ಒಳ್ಳೆಯದು. ಈ 'ಜೈ ಸೀತಾ ರಾಂ' ನೊಂದಿಗೆ ಇನ್ನೊಂದೆರಡು ವಾಕ್ಯಗಳನ್ನು ನೆನಪಿನಲ್ಲಿಟ್ಟುಕೊ. 'ಅಲಕ್ ನಿರಂಜನ್', 'ಸರ್ವಂ ಕಲ್ಮಷಂ ಬ್ರಹಂ' ಎಂದ ಅಣ್ಣಯ್ಯ.

ಅಂಬಿಗ ಅಣ್ಣಯ್ಯನ ಅಮಾಯಕತ್ವ ನೋಡಿ ನಸುನಗೆ ಬೀರಿದ ವಿಜಯ. ಬಾಯಿಗೆ ತೋರಿದಂತೆ ಹೇಳುವನೇ ಹೊರತು ಆ ಮಾತುಗಳ ಅರ್ಥ, ಭಾವ, ಪವಿತ್ರತೆ ಅಣ್ಣಯ್ಯನಿಗೆ ತಿಳಿಯದು.

ಅಣ್ಣಯ್ಯನನ್ನು ವಿಜಯ ಹಿಂಬಾಲಿಸಿದ. ಅವರು ನೆಟ್ಟಗೆ ಅಡವಿಯನ್ನು ದಾಟಿ ನರ್ಮದಾ ನದಿಯ ತೀರಕ್ಕೆ ಬಂದರು.

ಅಲ್ಲಿ ಹಡಗಿನವರ ಕೋಲಾಹಲ ವಿಪರೀತವಾಗಿತ್ತು. "ರಾತ್ರಿ ಯಾರೋ ನನ್ನ ಹಡಗನ್ನು ದಾಟಿಸಿಬಿಟ್ಟಿದ್ದಾರೆ. ಅದು ಪತ್ತೆಯಿಲ್ಲದಾಗಿದೆ. ಎಷ್ಟು ಧೈರ್ಯ! ಎಂಥ ಸಾಹಸ! ಕಳ್ಳ ಸಿಕ್ಕಿದರೆ ಬಲಿ ಹಾಕುತ್ತೇನೆ" ಎಂದ ಒಬ್ಬ ಆಸಾಮಿ.

ಆತನ ಸುತ್ತು ನೆರೆದಿದ್ದವರೆಲ್ಲಾ ಇದೇ ಧೋರಣೆಗೆ ಹೊಂದಿದ್ದರು. ತಮ್ಮ ಗುರ್ತು



ಎಲ್ಲಿ ಕಂಡು ಹಿಡಿದು ಬಿಡುವರೋ ಎಂದು ವಿಜಯನು ಹೆದರಿದ.

"ಜೈ ಸೀತಾ ರಾಂ" ಎಂದು ಅಣ್ಣಯ್ಯ ಅವರನ್ನು ಸಮೀಪಿಸಿದ. "ಮಕ್ಕಳೇ, ಏನಿದು ಗಲಭೆ?" ಎಂದು ಗಂಭೀರವಾಗಿ ಅಧಿಕಾರ ವಾಣಿಯಿಂದ ಕೇಳಿದ.

ಅಲ್ಲಿದ್ದ ಅಂಬಿಗರೆಲ್ಲಾ ಇವರ ಸುತ್ತೂ ನೆರೆದರು. ಮೊದಲೇ ಹೆದರಿದ್ದ ವಿಜಯವರ್ಮ ಎಲ್ಲಿ ಅಣ್ಣಯ್ಯ ತಮ್ಮ ರಹಸ್ಯವನ್ನು ಬಯಲು ಮಾಡಿ ಬಿಡುತ್ತಾನೆಯೋ ಎಂದು ಮತ್ತಷ್ಟು ಹೆದರಿದ.

ಪರಿಸ್ಥಿತಿ ಇಷ್ಟುದೂರ ಬಂದ ಮೇಲೆ ಏನು ತಾನೇ ಮಾಡುವನು? ಆದ್ದರಿಂದ ಆಗ ಸುಮ್ಮನಿದ್ದ.




“ ರಾತ್ರಿ ಗಾಳಿ ಮಳೆಯಲ್ಲಿ ನಮ್ಮ ಹಡಗುಗಳನ್ನು ಯಾರೋ ಕದ್ದುಬಿಟ್ಟಿದ್ದಾರೆ. ಅವರೀಗ ಎಲ್ಲಿರುವರೋ, ಅಂಜನ ಹಾಕಿ ತಿಳಿಸಿ ಮಹಾಸ್ವಾಮಿ” ಎಂದರು ಹಡಗಿನವರು.

“ಮಕ್ಕಳೇ, ಇದಕ್ಕೆಲ್ಲಾ ಅಂಜನವೇಕೆ?” ಎಂದ ಅಣ್ಣಯ್ಯ. ತರುವಾಯ ನರ್ಮದೆಯ ಆಚೆ ದಡದಲ್ಲಿದ್ದ ದೇವಪುರದಕಡೆ ತೋರಿಸಿ, “ ನಿಮ್ಮ ಹಡಗುಗಳೆಲ್ಲಾ ನರ್ಮದಾ ನದಿಯ ದಡದಲ್ಲಿರಬಹುದು. ಅವುಗಳನ್ನು ಅಪಹರಿಸಿದ ಧೂರ್ತರು ಅದೋ ಅಲ್ಲಿ ಕಾಣಿಸುವ ಭವನದಲ್ಲಿದ್ದಾರೆ” ಎಂದ.

ಆ ಮಾತುಗಳನ್ನು ಕೇಳಿ ಅಂಬಿಗರಿಗೆ ತುಂಬಾ ರೋಷವುಂಟಾಯಿತು. ಆವೇಶದಿಂದ “ ನಡೆಯಿರಿ, ನಡೆಯಿರಿ, ಆ ಕಳ್ಳರನ್ನು ಕೊಲ್ಲಬೇಕು. ನಮಗೆ ಅಪಕಾರ ಮಾಡಿದ ದುರುಳರವರು. ಅವರನ್ನು ಉಳಿಸಬಾರದು ಸದೆಬಡೆದು ಹಾಕೋಣ” ಎಂದು ತಮ್ಮ ಕೈಗೆ ಸಿಕ್ಕಿದ ಆಯುಧಗಳನ್ನು ತೆಗೆದುಕೊಂಡರು.

ಇದೆಲ್ಲವನ್ನೂ ಕೌತುಕದಿಂದ ನೋಡುತ್ತಿದ್ದ ವಿಜಯವರ್ಮ. ಅಂಬಿಗ ಅಣ್ಣಯ್ಯನ ಯುಕ್ತಿಗೆ, ಸಂದರ್ಭೋಚಿತವಾದ ಮಾತಿಗೆ ಮೆಚ್ಚಿಕೊಂಡ. ಅಕಸ್ಮಾತ್ ಎಲ್ಲಿ ತಮ್ಮ ಗುಟ್ಟು ಬಯಲಾಗುವುದೋ ಎಂದು ಮನಸ್ಸಿನಲ್ಲಿ ಹೆದರಿಕೆ ಇದ್ದೇ ಇತ್ತು.

“ಮಕ್ಕಳೇ, ಅವಸರದ ಕೆಲಸ ಕೂಡದು” ಎಂದು ಎಚ್ಚರಕೊಟ್ಟ ಅಣ್ಣಯ್ಯ. “ನಮ್ಮಿಬ್ಬರನ್ನೂ ಆಚೆ ದಡ ಸೇರಿಸಿ. ಆ ಭವನದಲ್ಲಿರುವವರ ವಿಷಯ ತಿಳಿದುಕೊಂಡು ಬರುತ್ತೇವೆ. ತರುವಾಯ ನಿಮ್ಮ ಇಷ್ಟಪ್ರಕಾರ ಸೇಡು ತೀರಿಸಿಕೊಳ್ಳಲು ಸುಲಭವಾಗಬಹುದು”

“ ಹಾಗಾದರೆ ನೀವು ಯಾವಾಗ ಹಿಂತಿರುಗುವಿರಿ ಸ್ವಾಮಿ ?” ಎಂದು ಆತುರದಿಂದ ಕೇಳಿದರು ಅವರು.

“ ತಕ್ಷಣ ಬಂದು ಬಿಡುವೆವು. ಅನ್ಯಾಯಕ್ಕೆ ಗುರಿ ಮಾಡಿದ ತಮ್ಮಂತಹ ಅಮಾಯಕರಿಗೆ ನ್ಯಾಯ ದೊರಕಿಸುವುದೇ ನಮ್ಮ ಗುರಿ. ನಮ್ಮ ಕರ್ತವ್ಯ! ಮೊದಲು ನಮ್ಮನ್ನು ನದಿ ದಾಟಿಸಿರಿ. ಮತ್ತೊಂದು ಮಾತು—ಆ ಭವನದಿಂದ ನದಿ ದಾಟಿ ಬರುವ ಭಟರನ್ನು ನಾವು ಬರುವವರೆವಿಗೂ ಬಂಧಿಸಿಡಿ” ಎಂದು ಆಜ್ಞೆ ಮಾಡಿದ ಅಣ್ಣಯ್ಯ.

ಈ ಮಾತುಗಳನ್ನು ಕೇಳಿ ಅಂಬಿಗರು ಆನಂದಪಟ್ಟರು. 'ನಮ್ಮ ಪಾಲಿನ ದೇವರ ಹಾಗೆ ಬಂದರು ಈ ಯತೀಶ್ವರರು' ಎಂದು ಕೊಂಡು ಕೂಡಲೇ ಒಂದು ಹಡಗಿನಲ್ಲಿ ಅವರನ್ನೇರಿಸಿಕೊಂಡು ನದಿ ದಾಟಿಸಿದರು.

ಭೀಮವರ್ಮನ ಭವನಕ್ಕೆ ಸ್ವಲ್ಪ ದೂರದಲ್ಲಿ ಒಂದುಕಡೆ ಹಡಗನ್ನು ನಿಲ್ಲಿಸಿದರು. ಯೋಗೀಶ್ವರರಿಬ್ಬರೂ ಹಡಗಿನಿಂದ ಇಳಿದು ನೆಟ್ಟಗೆ ಭವನವನ್ನು ಪ್ರವೇಶಿಸಿದರು. ಮಂಗಳ ವಾದ್ಯಗಳು ಮೊಳಗುತ್ತಿವೆ.

"ಮದುವೆಯ ಏರ್ಪಾಟು ತುಂಬಾ ಜೋರಾಗಿರುವಂತಿದೆ. ಕರುಣಳನ್ನು ಈ ಮದುವೆಗೆ ಬಹಳ ಬಲವಂತಪಡಿಸಿರಬೇಕು" ಎಂದ ವಿಜಯ.

ಅಣ್ಣಯ್ಯ ಆತನ ಮಾತುಗಳನ್ನು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. "ಜೈ ಸೀತಾ ರಾಂ" ಎಂದು ಜಯಕಾರಮಾಡಿ, ಗುಂಪಿನಲ್ಲಿ ಸೇರಿ, ಭವನದಲ್ಲೆಲ್ಲಾ ಸುತ್ತಾಡಲು ಪ್ರಾರಂಭಿಸಿದ. ವಿಜಯನೂ ಸಹ ಆತನನ್ನು ಹಿಂಬಾಲಿಸಿದ. ವಿಜಯವರ್ಮನ ಅನುಮಾನ ದೃಢವಾಯಿತು. ಅಲ್ಲಿ ಓಡಾಡುತ್ತಿದ್ದ ದಾಸದಾಸಿಯರ ಮತ್ತು ಜನರ ಮಾತುಗಳಿಂದ ಕರುಣಳಿಗೆ ಬಲವಂತ ಮಾಡಿ ಮದುವೆ ಮಾಡುತ್ತಿರುವರೆಂದು ತಿಳಿಯಿತು. ವರನು ಯಾರೋ ಆತನಿಗೆ ತಿಳಿಯಲಿಲ್ಲ. ಸಮಯವು ಬಹಳ ಇಕ್ಕಟ್ಟಿನದಾಗಿತ್ತು. ಅವನ ಹೃದಯವು ತುಂಬಾ ಕಸವಿಸಿಗೊಳ್ಳುತ್ತಿತ್ತು. ಆ ಸಮಯದಲ್ಲಿ ಒಳ್ಳೆಯ ಭರ್ಜರಿ ಪೋಷಾಕುಗಳನ್ನೂ ಬೆಲೆ






ಬಾಳುವ ಆಭರಣಗಳನ್ನೂ ಧರಿಸಿಕೊಂಡಿದ್ದ ಮೂವರು ಬಂದು ಮೂಲೆಯಲ್ಲಿ ಹರಟೆ ಕೊಚ್ಚುತ್ತಿದ್ದರು. "ಜೈ ಸೀತಾ ರಾಂ" ಎಂದು ಅವರ ಹತ್ತಿರಕ್ಕೆ ಹೋದ ಅಣ್ಣಯ್ಯ.

"ಓ, ಯಾರೋ ಸಾಧುಗಳು ಬಂದಿದ್ದಾರೆ. ನಮ್ಮ ಪ್ರಶ್ನೆಗಳಿಗೆ ಉತ್ತರಹೇಳಬಹುದು" ಎಂದ ಅವರಲ್ಲೊಬ್ಬ.

ಅಣ್ಣಯ್ಯ ಕಮಂಡಲುವನ್ನು ಮೇಲೆತ್ತಿ "ಮಕ್ಕಳೇ, ಏನು ನಿಮ್ಮ ಸಂದೇಹ?" ಎಂದ. ವಿಜಯ ಆತನ ಪಕ್ಕದಲ್ಲಿ ನಿಂತಿದ್ದ.

"ಕಬಂಧ ವರ್ಮನೊಂದಿಗೆ ಕರುಣಳ ವಿವಾಹ ಸುಸೂತ್ರವಾಗಿ ಜರುಗುವುದೇ?"

"ಆ ಸಂಶಯ ಬರಲು ಕಾರಣವೇನು?" ಎಂದ ಅಣ್ಣಯ್ಯ ಕಣ್ಣರಳಿಸುತ್ತಾ.

"ತ್ರಿಕಾಲಜ್ಞರಾದ ನಿಮಗೆ ಅದರ ಕಾರಣ ತಿಳಿದಿರ ಬೇಕು. ಸರಿ, ನೀವು ಚಂಡಿದಾಸನ ಗುಂಪಿನವರಲ್ಲವಷ್ಟೆ?" ಎಂದೊಬ್ಬ ಸಂಶಯ ಸೂಚಿಸಿದ.

ಈ ಮಾತುಗಳನ್ನು ಕೇಳಿ ವಿಜಯ ತುಸ ಬೆಚ್ಚಿಬಿದ್ದ. ಆದರೆ ಅಣ್ಣಯ್ಯ ಗಂಭೀರ ವಾಣಿಯಿಂದ,

"ಮಕ್ಕಳೇ, ನೀವು ಹೇಳಿದ್ದು ಸರಿ. ತ್ರಿಕಾಲಜ್ಞರಾದ ನಮಗೆ ಸಮಸ್ತವಿಷಯ ಗಳೂ ತಿಳಿದಿರುತ್ತವೆ. ದ್ರೋಹಿಯೂ, ದರೋಡೆಕಾರನೂ ಆದ ಚಂಡೀದಾಸ ನೊಂದಿಗೆ ನಮ್ಮನ್ನು ಸೇರಿಸುವುದು ಮಹಾಪ ರಾಧ. ನಿಜವಾಗಿ ನೋಡಿದರೆ ನಿಮಗೆ ನಾವು ಶಾಪ ಕೊಡಬೇಕು. ಆದರೆ ಈ ಸಾರಿ ನಿಮ್ಮನ್ನು ಕ್ಷಮಿಸಿರುವೆವು" ಎಂದು ಕಣ್ಣು ಕೆಂಡದಂತೆ ಕೆಂಪಗೆ ಮಾಡಿದ.

ಅಣ್ಣಯ್ಯನ ಗಂಭೀರವಾಣಿ ಕೇಳಿ ಅವರು ಗಡಗಡ ನಡುಗಿದರು.

"ಕ್ಷಮಿಸಿ, ಮಹಾತ್ಮರೇ ಕ್ಷಮಿಸಿ" ಎಂದು ಅವರು ಅಣ್ಣಯ್ಯ ಮತ್ತು ವಿಜಯವರ್ಮನ ಪಾದಗಳ ಮೇಲೆ ಬಿದ್ದು ಕ್ಷಮೆ ಯಾಚಿಸಿದರು.

"ಏಳಿ, ಏದ್ದೇಳಿ. ಈಸಾರಿ ಕ್ಷಮಿಸಿದ್ದೇವೆ" ಎಂದ ಅಣ್ಣಯ್ಯ. "ಹಿಮಾಲಯದಲ್ಲಿ ಅರು ವತ್ತುವರ್ಷ ತಪಸ್ಸು ಮಾಡಿದ್ದು ನಿಮ್ಮಂತಹ ಮೂರ್ಖರ ನಿಂದೆಗಳನ್ನು ಹೊರುವುದಕ್ಕಲ್ಲ. ಹೂಂ, ಹೋಗಿ ಇಲ್ಲಿಂದ ತೊಲಗಿ. ಕರುಣ ಳೊಂದಿಗೆ ಕಬಂಧವರ್ಮನ ವಿವಾಹ ನಿರಾ

ಟಂಕವಾಗಿ ನಡೆಯುವುದು" ಎಂದು ಹೇಳಿ ಅಲ್ಲಿಂದ ಹೊರಟುಬಿಟ್ಟ. ವಿಜಯನೂ ಅವನ ಹಿಂದೆಯೆ ನಡೆದ.

ವಿಜಯನಿಗೆ ವಿಪರೀತ ಕೋಪ ಬಂತು. ಕಬಂಧವರ್ಮನ ವಿಷಯ ಆತನಿಗೆ ತಿಳಿದಿದೆ. ಐವತ್ತು ವರ್ಷದ ಮುದುಕ ಕಬಂಧವರ್ಮನಿಗೂ, ಸುಕೋಮಲೆ ಕರುಣಳಿಗೂ ಮದುವೆಯೇ? ಭೀಮವರ್ಮನ ಬಲೆಯಿಂದ ಕರುಣಳನ್ನು ಹೇಗಾದರೂ ಕಾಪಾಡಬೇಕು ಎಂದು ನಿರ್ಧರಿಸಿದ ವಿಜಯ.

ಅಣ್ಣಯ್ಯ ಅಡಿಗಡಿಗೆ 'ಜೈ ಸೀತಾರಾಂ' ಎಂದೆನ್ನುತ್ತಾ ಭವನದಲ್ಲೆಲ್ಲಾ ಸುತ್ತಾಡುತ್ತಿದ್ದ. ಸನ್ಯಾಸಿಯ ವೇಷದಲ್ಲಿದ್ದ ಅವರನ್ನು ಯಾರೂ ನಿರ್ಬಂಧಿಸುತ್ತಿರಲಿಲ್ಲ. ವೇಷವೂ ವೇಷಕ್ಕೆ ತಕ್ಕ ನಟನೆಯೂ ಅವರಿಗೆ ಚೆನ್ನಾಗಿ ಒಪ್ಪಿತ್ತು. ಐಹಿಕ ಸುಖಗಳನ್ನು ತೊರೆದವರನ್ನು ಕಂಡರೆ ಯಾರಿಗೂ ಅನುಮಾನವುಂಟಾಗುವುದಿಲ್ಲವಷ್ಟೆ!

ಸ್ವಲ್ಪ ಹೊತ್ತು ಅತ್ತಿತ್ತ ಓಡಾಡಿದ ನಂತರ ವಿಜಯವರ್ಮನು ಅಣ್ಣಯ್ಯನನ್ನು ಒಂದು ಪಕ್ಕಕ್ಕೆ ಕರೆದ. ಜನ ಸಮೂಹವಿಲ್ಲದೆಡೆಯಲ್ಲಿ ಅವರಿಬ್ಬರೂ ಕುಳಿತುಕೊಂಡು ಮುಂದಿನ ಕರ್ತವ್ಯವನ್ನು ಸಾವಕಾಶವಾಗಿ ಯೋಚಿಸಿಕೊಂಡರು.

"ಈ ವಿವಾಹವನ್ನು ಹೇಗಾದರೂ ಮಾಡಿ ನಿಲ್ಲಿಸಲೇ ಬೇಕು. ಕೂಡಲೇ ನಾವು ಸತ್ರಕ್ಕೆ ಹಿಂತಿರುಗಿ ಕೆಲವರನ್ನು ಜೊತೆಮಾಡಿಕೊಂಡು



ಬರಬೇಕು. ಏನುಹೇಳುವಿ ಅಣ್ಣಯ್ಯ?" ಎಂದ ವಿಜಯ. "ಅದಾಗದು, ಇನ್ನೊಂದುಅರ್ಧಗಂಟೆಯಲ್ಲಿ ಮದುವೆಯ ಗುಂಪಿನವರೆಲ್ಲಾ ಅಡವಿಯಲ್ಲಿರುವ ದೇವಸ್ಥಾನಕ್ಕೆ ಹೊರಡುವರು. ದೇವಸ್ಥಾನದಲ್ಲಿ ಮದುವೆ. ಅಷ್ಟರೊಳಗೆ ನಾವು ಜನರನ್ನು ಸೇರಿಸಿಕೊಂಡು ಬರಲು ಸಮಯವಿಲ್ಲ" ಎಂದ ಅಣ್ಣಯ್ಯ.

"ಹಾಗಾದರೆ ಇಂದೋ ನಾಳೆಯೋ ಸಾಯುವ ಆ ಮುದುಕನೊಂದಿಗೆ ಕರುಣಳ ವಿವಾಹವು ನಡೆಯಲೇ ಬೇಕೇ?" ವಿಜಯನ ಮಾತಿನಲ್ಲಿ ದುಃಖವೂ ಉಕ್ರೋಷವೂ ಆತುರವೂ ಅಡಗಿತ್ತು.

ಅಣ್ಣಯ್ಯ ಪಕಪಕನೆ ನಕ್ಕು, ವಿಜಯನಿಗೆ ಏನೋ ಸಂಜ್ಞೆಮಾಡಿ ದೂರದಲ್ಲಿ ಗೋಡೆಗೆ

ಆತು ನಿಂತಿದ್ದ ಒಬ್ಬಾತನನ್ನು ತೋರಿಸಿದ. ಅವನಾರು?

ವಿಜಯನ ಆಶ್ಚರ್ಯಕ್ಕೆ ಪಾರವೇ ಇಲ್ಲ. ಗೋಡೆಯ ಪಕ್ಕದಲ್ಲಿ ನಿಂತು ಮದುವೆಯ ಏರ್ಪಾಟುಗಳನ್ನೆಲ್ಲಾ ನಿರೀಕ್ಷಿಸುತ್ತಿದ್ದ ವ್ಯಕ್ತಿ ಚಂಡಿದಾಸನ ಗುಂಪಿಗೆ ಸೇರಿದವನು.

ವಿಜಯವರ್ಮನು ಸುತ್ತಲೂ ಒಂದು ಸಾರಿ ದೃಷ್ಟಿ ಬೀರಿ 'ಜೈ ಸೀತಾ ರಾಂ' ಎಂದೆನ್ನುತ್ತಾ ಆತನ ಬಳಿಗೆ ಹೋದ. ಆತನ ಹಸ್ತರೇಖೆಗಳನ್ನು ಪರೀಕ್ಷಿಸುವವನ ಹಾಗೆ ನಟಿಸುತ್ತಾ—

"ಅರ್ಧ ಗಂಟೆಯಲ್ಲಿ ಮದುವೆಯವರ ಗುಂಪೆಲ್ಲಾ ಅಡವಿಯಲ್ಲಿರುವ ದೇವಸ್ಥಾನಕ್ಕೆ ಬರುತ್ತದೆ. ವ್ಯವಧಿಯಿಲ್ಲ. ಸಿಧಾನಿಸಬಾರದು. ಕಾರ್ಯ ಮಿಂಚಿ ಹೋದೀತು. ಈ ವಿಷಯ ಚಂಡಿದಾಸನಿಗೆ ಹೇಳು" ಎಂದ.

ಆ ವ್ಯಕ್ತಿ ಬೆರಗಾಗಿ "ನೀವು ಯಾರು?" ಎಂದು ಕೇಳಿದ.

"ಓ, ನಾನು ಯಾರೆಂಬುದು ನಿನಗೆ ತಿಳಿಯಲಿಲ್ಲವೇ? ಹೋಗಲಿ ಬಿಡು. ಅದೂ ಒಂದು ರೀತಿ ಉತ್ತಮವೇ ಆಯಿತು. ತತ್ ಕ್ಷಣ ಚಂಡಿದಾಸನ ಹತ್ತಿರಹೋಗಿ ಈ ವಿಷಯ ಹೇಳು" ಎಂದು ವಿಜಯ ತ್ವರೆಪಡಿಸಿದ. ಮತ್ತೆ ಅವನೇನೂ ತಡೆ ಹೇಳಲಿಲ್ಲ. 'ಒಳ್ಳೆಯದು' ಎಂದು ಆತನು ತಲೆಯಾಡಿಸಿ, ಅಲ್ಲಿಂದ ಸರಸರನೆ ಹೊರಟುಹೋದ.

ಸ್ವಲ್ಪ ಸಮಯವಾದನಂತರ ಮದುವೆಯ ಪರಿವಾರವೆಲ್ಲಾ ದೇವಸ್ಥಾನಕ್ಕೆ ಹೊರಟಿತು. ಜನಜಂಗುಳಿಯ ಗುಂಪು, ಮಂಗಳವಾದ್ಯಗಳ ಮೊಳಗಾಟಗಳಿಂದ ವಾತಾವರಣ ಕೋಲಾಹಲಕರವಾಗಿತ್ತು.

ಸನ್ಯಾಸಿವೇಷ ತಾಳಿದ್ದ ಅಣ್ಣಯ್ಯ ಮತ್ತು ವಿಜಯವರ್ಮರೂ ಅವರೊಂದಿಗೆ ಕಲೆತುಕೊಂಡು ದೇವಸ್ಥಾನಕ್ಕೆ ಹೊರಟರು.

ವಾದ್ಯಗಳ ಕೋಲಾಹಲವು ವಿಜಯವರ್ಮನ ಹೃದಯಕ್ಕೆ ತಿವಿಯುವಂತೆ ಕರ್ಕಶವಾಗಿ ಕೇಳುತ್ತಿತ್ತು. ಕರುಣಳನ್ನು ಉಳಿಸೆಂದು ದೇವರನ್ನು ಪ್ರಾರ್ಥಿಸಿಕೊಳ್ಳುತ್ತಾ ಇದ್ದನು ವಿಜಯವರ್ಮ.

[ ಇನ್ನೂ ಇದೆ ]



# ಒಂದು ಮುಖದಿಂದ ವಿವಿಧ ಮುಖಗಳು

ಕೆಳಗಿರುವ ಚಿತ್ರ ನೋಡು. ಅದು ತುಂಬಾ ವಿಚಿತ್ರವಾಗಿ ಕಾಣುವುದಷ್ಟೆ. ಇದರಿಂದ ನೀನು ಲೆಕ್ಕವಿಲ್ಲದಷ್ಟು ಮುಖಗಳನ್ನು ಚಿತ್ರಿಸಬಹುದು. ಮೊದಲು ಒಂದು ತೆಳುವಾದ ಕಾಗದ ತೆಗೆದುಕೊ. ಸೀಸದ ಕಡ್ಡಿಯಿಂದ ಈ ಚಿತ್ರವನ್ನು ಅದರಮೇಲೆ ತಿದ್ದು. ಆಮೇಲೆ ಅದನ್ನು ಮಸಿಯಿಂದ ಬರೆ. ಆ ಕಾಗದ ಒಂದುರಟ್ಟಿಗೆ ಅಂಟಿಸು.

ಹೀಗೆ ಅಂಟಿಸುವುದರಲ್ಲಿ ಒಂದು ರೀತಿಯಿದೆ. ರಟ್ಟಿನ ಮೇಲೆ ಗೋಂದು ಹಾಕಿ ಕಾಗದವನ್ನು ಅದರಮೇಲೆ ಸುಕ್ಕು ಬರದಂತೆ ಅಂಟಿಸಬೇಕು. ಅದು ಚೆನ್ನಾಗಿ ಒಣಗಿದ ತರುವಾಯ ಇನ್ನೊಂದು ತೆಳು ಕಾಗದ ತೆಗೆದುಕೊಂಡು ಅದನ್ನು ರಟ್ಟಿನ ಮೇಲಿಟ್ಟು ಸರಿಯಾಗಿ ಮಧ್ಯ ಎಂದರೆ ನಕ್ಷತ್ರದ (*) ಗುರುತಿರುವ ಜಾಗದಲ್ಲಿ ಒಂದು ಗುಂಡುಸೂಜಿ ಚುಚ್ಚು. ಈಗ ಆ ಚಿತ್ರದಲ್ಲಿರುವ ಯಾವುದಾದರೊಂದು ಟೋಪಿಯನ್ನು ಕಾಗದದಮೇಲೆ ತಿದ್ದು. ಆಮೇಲೆ ಅದನ್ನು ಮುಖವಿರುವ ಜಾಗಕ್ಕೆ ಸರಿಸಿ ಮೂಗನ್ನು ತಿದ್ದು. ಮತ್ತೆ ಇನ್ನೊಂದು ಕಡೆಗೆ ಸರಿಸಿ ಮತ್ತೊಂದು ಮುಖದ ಕಣ್ಣುಗಳನ್ನು ತಿದ್ದು. ಮಗದೊಂದು ಕಡೆ ತಳ್ಳಿ ಇನ್ನೊಂದು ಮುಖದ ಬಾಯಿ ತಿದ್ದು. ಹೀಗೆ ಮಾಡಿದರೆ ಒಂದು ಸುಂದರಾಕಾರವಾದ ಮುಖವೇರ್ಪಡುವುದು.




ಒಂದೊಂದು ಮುಖದಿಂದ ಒಂದೊಂದು ಅವಯುವವನ್ನು ತೆಗೆದು ತಿದ್ದುವುದರಿಂದ ಈ ಚಿತ್ರದಲ್ಲಿ ಕಾಣಿಸಿರುವುದಷ್ಟೇ ಅಲ್ಲದೆ ಇನ್ನೂ ಅನೇಕ ಮುಖಗಳಾಗಲು ಅವಕಾಶವಿದೆ. ಕೆಲವು ಮುಖಗಳ ಮೀಸೆಯನ್ನು ತಿದ್ದದೆ, ಟೋಪಿಗಳಿಗೆ ಪಕ್ಷಿಯ ಪುಕ್ಕಗಳನ್ನು ಹಾಕಿ ಬರೆದರೆ ದೊರಸಾನಿಯರ ಚಿತ್ರಗಳೂ ಆಗುವುದುಂಟು.

ಈ ಗಮ್ಮತ್ತು ಮಾಡಲು ಅವಶ್ಯವಾದ ಅಂಶಗಳು ಮೂರು: ಗುಂಡು ಸೂಜಿ ಕದಲದೆ ಸ್ಥಿರವಾಗಿರುವಂತೆ ಚುಚ್ಚಬೇಕು. ಮೆತ್ತಗಿರುವ ಕರೀ ಸೀಸದ ಕಡ್ಡಿ ಉಪಯೋಗಿಸಬೇಕು. ಮೂರನೆಯದು, ತಿದ್ದುವಾಗ ತುಂಬಾ ಒತ್ತಿ ಬರೆಯಬಾರದು.




ಹಿಂದೆ ವಿಂಧ್ಯಾಚಲ ರಾಜ್ಯವನ್ನು ಹರಿಹರ ರಾಯರು ಪಾಲಿಸುತ್ತಿದ್ದರು. ರಾಯರಿಗೆ ಒಬ್ಬಳೇ ಮಗಳು. ಆಕೆಯ ಹೆಸರು ವಿದ್ಯಾವತಿ. ಆಕೆಗೆ ಪ್ರಾಪ್ತವಯಸ್ಸು ಬಂತು. ಮದುವೆಯ ಸಿದ್ಧತೆಗಳು ನಡೆಯುತ್ತಿವೆ. ದೇಶದೇಶಗಳಿಂದ ನಿಪುಣರಾದ ಕೆಲಸಗಾರರು ಬಂದು ನೂತನ ಭವನ ನಿರ್ಮಾಣ ಕಾರ್ಯದಲ್ಲಿ ನಿರತರಾಗಿರುವರು. ಅನೇಕ ಮಂಟಪಗಳೂ ಚಿತ್ರಶಾಲೆಗಳೂ ಸಿದ್ಧವಾಗುತ್ತಿವೆ. ಕೆಲಸಗಳೆಲ್ಲಾ ಮುಗಿದುವು. ಮದುವೆಯ ಮಂಟಪದ ರಚನೆಯೂ ಮುಗಿಯಿತು. ಮಂತ್ರಿ ಮತ್ತು ಪರಿವಾರದೊಂದಿಗೆ ರಾಯರು ಬೇಟಿಕೊಟ್ಟು ಎಲ್ಲವನ್ನೂ ಪರಿಶೀಲಿಸಿ ತೃಪ್ತಿಹೊಂದಿದರು. ಎಲ್ಲವೂ ಸೊಗಸಾಗಿದ್ದುವು. ಆದರೆ ಮಂಟಪದ ಗೋಡೆಗಳ ಮೇಲಿನ ಚಿತ್ರಗಳು ಸಾಧಾರಣ ತರಗತಿಯದಾಗಿದ್ದುವು. ಅವುಗಳಲ್ಲಿ ಯಾವುದೇ ಬಗೆಯ ಪ್ರತ್ಯೇಕತೆ ಇರಲಿಲ್ಲ. ಈ ವಿಷಯದಲ್ಲಿ ಮಾತ್ರ ರಾಯರಿಗೆ ತುಸ ಅಸಮಾಧಾನವಾಯಿತು ಆಗ ಮಂತ್ರಿ ಯೋಚಿಸಿ ಅರಸನನ್ನು ಕುರಿತು "ಪ್ರಭುವರ್ಯರೇ, ಅಪರೂಪವಾದ ಚಿತ್ರಗಳನ್ನು ತಯಾರಿಸಿದವರಿಗೆ ಕೋರಿದ ಬಹುಮಾನ ಕೊಡುವೆವೆಂದು ಸಾರಿಸಿದರೆ ಆಗ ಉತ್ತಮ ಚಿತ್ರಕಾರರು ಬರುವರು" ಎಂದು ಸಲಹೆಕೊಟ್ಟ.

ರಾಯರಿಗೆ ಈ ಸಲಹೆ ಯುಕ್ತವಾಗಿ ತೋರಿತು. ಅದೇ ರೀತಿಯಾಗಿ ಡಂಗುರ ಹೊಡೆಸಿದರು. ಕೆಲ ದಿನಗಳಾದಮೇಲೆ ಒಂದು ದೇಶದಿಂದ ಇಬ್ಬರು ಚಿತ್ರಕಾರರು ಬಂದರು. ತಮ್ಮ ತಮ್ಮ ಚಾತುರ್ಯ, ಪ್ರತಿಭೆಗಳನ್ನು ಹೇಳಿಕೊಂಡರು. ಆದರೆ ಎರಡನೇ ಚಿತ್ರಕಾರನು ಮಾತ್ರ ಒಂದು ಬೇಡಿಕೆಯನ್ನು ಸಲ್ಲಿಸಿದ.

ಮೊದಲನೇ ಚಿತ್ರಕಾರನು ಚಿತ್ರರಚಿಸಲು ಆರಿಸಿಕೊಂಡ ಗೋಡೆಯ ಸ್ಥಳಕ್ಕೆ ಎದುರಾಗಿರುವ ಗೋಡೆಯಮೇಲೆ ತಾನು ಚಿತ್ರಿಸಲು ಅವಕಾಶ ಕೊಡಬೇಕೆಂದು ಆತನ

ಎಂ. ರಾಮು, ಮಧೂರು

ಬೇಡಿಕೆ. ರಾಯರು ಇದಕ್ಕೆ ಸಮ್ಮತಿಸಿದರು.

ಚಿತ್ರಕಾರರಿಬ್ಬರೂ ಒಂದೊಂದು ಗೋಡೆ ಆರಿಸಿಕೊಂಡು ಒಂದು ತಿಂಗಳ ಅವಧಿ ಕೇಳಿದರು. ಕೂಡಲೇ ಕೆಲಸಕ್ಕೆ ಪ್ರಾರಂಭಿಸಿದರು. ಸರಿಯಾಗಿ ಒಂದು ತಿಂಗಳ ಅವಧಿ ಪೂರ್ತಿ ಆಯಿತು. ಚಿತ್ರಕಾರರಿಬ್ಬರೂ ರಾಯರಿಗೆ ತಮ್ಮ ಕೆಲಸ ಪೂರ್ತಿ ಆಯಿತೆಂಬ ವಿಷಯವನ್ನು ಮನವಿ ಮಾಡಿಕೊಂಡರು. ರಾಯರು ತಮ್ಮ ಪರಿವಾರ ಸಮೇತ ದಯಮಾಡಿಸಿದರು. ಮೊದಲನೇ ಚಿತ್ರಕಾರನ ಗೋಡೆಯ ಹತ್ತಿರ ಹೋಗಿ ತೆರೆಸರಿಸಿ ನೋಡಿದರು. ರಾಯರು ಮತ್ತು ಅವರ ಪರಿವಾರ ಆಶ್ಚರ್ಯಚಕಿತರಾದರು. ಪ್ರಕೃತಿ ಎಲ್ಲಾ ಗೋಡೆಯಮೇಲೆ ತಾಂಡವವಾಡುತ್ತದೆ! "ಭಲಾ, ಭೇಷ್. ಅದ್ಭುತವಾಗಿದೆ ಚಿತ್ರ!" ಎಂದರು ರಾಯರು.

ಯಾರ ಅನುಮತಿಯೂ ಇಲ್ಲದೆ ಎರಡನೇ ಚಿತ್ರಕಾರನು ತನ್ನ ಗೋಡೆಯಮೇಲಿದ್ದ ಪರದೆಯನ್ನು ಪಕ್ಕಕ್ಕೆ ಸರಿಸಿದ. ರಾಯರೂ ಅವರ ಪರಿವಾರವೂ ತಮ್ಮ ದೃಷ್ಟಿಯನ್ನು ಅತ್ತಕಡೆ ತಿರುಗಿಸಿದರು. ಅದನ್ನು ನೋಡಿ ಮಂತ್ರವಶರಾದವರಂತೆ ಮುಗ್ಧರಾದರು. ಸ್ವಲ್ಪ ಹೊತ್ತಿನ ನಂತರ ಚೇತರಿಸಿಕೊಂಡು "ಅಹಹ್ಹ!" ಎಂದು ಉದ್ಗಾರ ತೆಗೆದರು.

ಮೊದಲನೆಯವನ ಚಿತ್ರ ಅತಿ ಸಹಜವಾಗಿದ್ದು ಅವರನ್ನು ಬೆರಗು ಮಾಡಿತು. ಎರಡನೇ ಚಿತ್ರಕಾರನ ಚಿತ್ರ ಅದೇ ದೃಶ್ಯವನ್ನು ಜೀವಕಳೆಯಿಂದ ತುಂಬಿ ತುಳುಕುತ್ತಿರುವಂತೆ ತೋರಿಸುತ್ತಿದೆ. ಇಬ್ಬರೂ ಒಂದೇ ಚಿತ್ರವನ್ನು ಹೇಗೆ ಚಿತ್ರಿಸಿದರು? ಬಹುಮಾನ ಯಾರಿಗೆ ಕೊಡಬೇಕು? ಇದೊಂದು ಸಮಸ್ಯೆಯಾಗಿ ಪರಿಣಮಿಸಿತು.

ಇದರ ರಹಸ್ಯ ಇಷ್ಟೇ : ಎರಡನೇ ಚಿತ್ರಕಾರನು ಯಾವೊಂದು ಚಿತ್ರವನ್ನೂ ಚಿತ್ರಿಸಿರಲಿಲ್ಲ. ಮೊದಲನೇ ಚಿತ್ರಕಾರನು ಕೆಲಸ ಪ್ರಾರಂಭ ಮಾಡಿದಾಗಿಂದ, ಆತನು ತನ್ನ ಗೋಡೆಯನ್ನು ಒಂದು ವಿಧವಾದ ದ್ರವದಿಂದ ತೊಳೆಯಲು ಪ್ರಾರಂಭಮಾಡಿದ. ಒಂದು ತಿಂಗಳೆಲ್ಲಾ ಆ ಗೋಡೆಗೆ ಮೆರಗು ಕೊಟ್ಟ. ಅದು ಕನ್ನಡಿಯಂತೆ ತಯಾರಾಗಿ ಎದುರಿನ ಚಿತ್ರವನ್ನು ಪ್ರತಿಫಲಿಸಿತ್ತು!



# ಊಸರವಳ್ಳಿ

ಈಗ ಆಡಿದ ಮಾತನ್ನು ಮತ್ತೆ ಸ್ವಲ್ಪ ಹೊತ್ತಿಗೆಲ್ಲಾ ಬದಲಾಯಿಸುವ ಜನ ಅನೇಕರಿದ್ದಾರೆ ಈ ಪ್ರಪಂಚದಲ್ಲಿ. ಆ ರೀತಿ ಅಡಿಗಡಿಗೆ ಅಭಿಪ್ರಾಯಗಳನ್ನು ಬದಲಾಯಿಸುವವರನ್ನು 'ಬಣ್ಣಬದಲಾಯಿಸಿದ' ಎಂದು ಹೇಳುವರು. ಈ 'ಬಣ್ಣಬದಲಾಯಿಸುವುದು' ಎಂಬ ಸಾಮತಿ ಊಸರವಳ್ಳಿಯಿಂದ ಹುಟ್ಟಿದೆ. ಪ್ರಾಣಿಗಳಲ್ಲಿ ಅನೇಕ ಬಣ್ಣಗಳುಳ್ಳ ಮತ್ತು ಆಗಾಗ ಬಣ್ಣವನ್ನು ಬದಲಾಯಿಸುವ ಪ್ರಾಣಿ ಒಂದೇ ಒಂದು—ಅದೇ ಊಸರವಳ್ಳಿ.

ಈ ರೀತಿ ಬಣ್ಣ ಬದಲಾಯಿಸುವ ಶಕ್ತಿ ದೇವರು ಈ ಪ್ರಾಣಿಗೇಕೆ ಕೊಟ್ಟ ಎಂಬುದೊಂದು ಸಮಸ್ಯೆ. ಸುತ್ತಮುತ್ತಲಿರುವ ವಾತಾವರಣಕ್ಕೆ ಅನುಗುಣವಾಗಿದ್ದರೆ ಯಾವ ಪ್ರಾಣಿಗಾದರೂ ಪ್ರಾಣಾಪಾಯ ಬಹಳ ವಿರುವುದಿಲ್ಲ. ಶತ್ರುಗಳಿಂದ ತನ್ನನ್ನು ರಕ್ಷಿಸಿಕೊಳ್ಳಲು ಊಸರವಳ್ಳಿ ತನ್ನ ಬಣ್ಣ ಬದಲಾಯಿಸುತ್ತಿರುತ್ತದೆ. ಇದು ಹಲ್ಲಿಯ ಜಾತಿಗೆ ಸೇರಿದ ಪ್ರಾಣಿ. ಇದರ ಚರ್ಮದ ತುಂಬಾ ರಂಧ್ರಗಳಿವೆ. ಅವು ತೀರಾ ಒತ್ತೊತ್ತಾಗಿರುತ್ತವೆ. ಇವುಗಳಲ್ಲಿ ವಿಚಿತ್ರವಾದ ಅಣುಗಳಿರುತ್ತವೆ.



ಅವುಗಳ ಮೂಲಕ ಬೆಳಕು ಅದರ ಮೇಲೆ ಬಿದ್ದರೆ ಮೈಯೆಲ್ಲಾ ಬೆಳ್ಳಗೆ ಕಾಣಿಸುವುದು. ಕೆಲವು ರಂಧ್ರಗಳಲ್ಲಿ ಎಣ್ಣೆಯಂತಹ ಪದಾರ್ಥವಿರುತ್ತದೆ. ಆ ರಂಧ್ರಗಳು ನಮ್ಮ ಕಣ್ಣಿಗೆ ಹಸಿರು ಬಣ್ಣವಾಗಿ ಕಾಣಿಸುವುವು. ಮತ್ತೆ ಕೆಲವು ರಂಧ್ರಗಳಲ್ಲಿ ಊದಾ, ಕೆಂಪು ಬಣ್ಣಗಳಿರುವ ಪದಾರ್ಥಗಳಿರುತ್ತವೆ. ಅವು ನಮಗೆ ಅದೇ ಬಣ್ಣಗಳಲ್ಲಿ ಕಾಣಿಸುವುದುಂಟು. ಇಷ್ಟು ಬಣ್ಣಗಳಿರುವ ಇದು ತನ್ನ ಶರೀರವನ್ನು ಮುದುಡಿಕೊಂಡರೂ ಅಗಲಿಸಿಕೊಂಡರೂ ಥಳಥಳಿಸಿ ತುಂಬಾ ವಿಚಿತ್ರವಾಗಿ ಕಾಣಿಸುವುದು.

ಊಸರವಳ್ಳಿ ಇಷ್ಟಬಂದಾಗ ಈ ರೀತಿ ಬಣ್ಣ ಬದಲಾಯಿಸುವುದು. ಹೊರಗಿನ ವಾಯುಗುಣದಿಂದಲೂ ಬಣ್ಣ ಬದಲಾಯಿಸುವುದೆಂದು ಹೇಳುವರು.




ಆರಾವಳಿ ಪ್ರಾಂತ್ಯದಲ್ಲಿ ಅಂಡ್ವಾ ಎಂಬುದೊಂದು ಅಡವಿ. ಆ ಅಡವಿಯಲ್ಲೊಂದು ಹಳ್ಳಿ. ಆ ಹಳ್ಳಿಗೆ ಸಮೀಪದಲ್ಲಿ ಒಂದು ಜೋಳದ ಹೊಲ. ಆ ಹೊಲದಲ್ಲಿ ಮಂಚದ ಮೇಲೆ ಕುಳಿತಿದ್ದ ಹದಿನೆಂಟು ವರ್ಷದ ತರುಣಿಯೊಬ್ಬಳು ಗುಬ್ಬಚ್ಚಿಗಳನ್ನು ಓಡಿಸುತ್ತಿದ್ದಳು.

ಇದ್ದಕ್ಕಿದ್ದಂತೆಯೇ 'ಹೋ, ಹೇ' ಎಂದು ಜನರು ಕೂಗುತ್ತಿರುವ ಧ್ವನಿ ಕೇಳಿಸಿತು. ಆಕೆ ತಟಾಲನೆ ಎದ್ದು ನಿಂತು ಅತ್ತಕಡೆ ನೋಡಿದಳು. ಒಂದು ಭಾರಿ ಕಾಡುಹಂದಿ ಪ್ರಾಣಭಯದಿಂದ ಓಡಿಬಂದು ಒತ್ತಾಗಿದ್ದ ಆ ಜೋಳದ ಹೊಲದಲ್ಲಿ ಅವಿತಿಟ್ಟುಕೊಂಡಿತು. ಅದನ್ನು ಓಡಿಸಿಕೊಂಡು ಬಂದ ಜನ, ಅವರೊಂದಿಗೆ ಬಂದಿದ್ದ ರಾಜಕುಮಾರ ಹೊಲದ ತನಕ ಬಂದು ಅಲ್ಲೇ ಸ್ತಬ್ಧರಾಗಿ ನಿಂತುಬಿಟ್ಟರು. ಒಳಗೆ ಅವಿತಿಟ್ಟುಕೊಂಡಿರುವ ಹಂದಿಯನ್ನು ಹೇಗೆ ಓಡಿಸುವುದು ಎಂದು ಅವರು ಯೋಚಿಸುತ್ತಿದ್ದರು.

ಆಗ ಮಂಚದ ಮೇಲಿದ್ದ ಕನ್ಯೆ "ಹಂದಿಗಾಗಿ ನೋಡುತ್ತಿರುವಿರಾ?" ಎಂದು ಕೇಳಿದಳು. 'ಹೌದು' ಎಂದರವರು. ಆಕೆ ತಟಕ್ಕನೆ ಒಂದು ಕೊನೆಮೊನೆಯಾಗಿದ್ದ ಕೋಲನ್ನು ತೆಗೆದು ಅದರಿಂದ ಹಂದಿಯ ಗಂಡಸ್ಥಳವನ್ನು ತಿವಿಯಲು ಅದು ವಿಲವಿಲ ಒದ್ದಾಡಿ ಪ್ರಾಣ ಬಿಟ್ಟಿತು. ಆಕೆ ಅದರ ಬಾಲ ಹಿಡಿದೆಳೆದುಕೊಂಡು ಹೋಗಿ ರಾಜಕುಮಾರನ ಮುಂದೆಸೆದಳು. ಬೇಟೆಯಲ್ಲಿ ತಾವು ಕೊಲ್ಲಬೇಕೆಂದಿದ್ದ ಪ್ರಾಣಿಯನ್ನು ಅನ್ಯರು ಕೊಂದರೆ ರಾಜಕುಮಾರರಿಗೆ ಕೋಪ ಬರುವುದೂ, ಹಾಗೆ ಕೊಂದವರೊಂದಿಗೆ ದ್ವಂದ್ವಯುದ್ಧ ಮಾಡುವುದೂ ವಾಡಿಕೆ. ಆದರೆ ಆ ರಾಜಕುಮಾರನಿಗೆ ಆ ತರುಣಿಯ ಮೇಲೆ ಕೋಪ ಬರಲಿಲ್ಲ. ಆಕೆಯ ಸಾಹಸಕ್ಕೆ ಆತ ಮುಗ್ಧನಾಗಿ, ತನ್ನ ಕೊರಳಲ್ಲಿದ್ದ ಮುತ್ತಿನ ಸರವನ್ನು ಆಕೆಗೆ ಹಾಕಲು ಹೋದ. ಇದಕ್ಕೆ ಆಕೆ ಲಜ್ಜೆಯಿಂದ 'ನನಗೇಕೆ ಇಂತಹ ಹಾರ? ನಾನೇನಂತಹ

ವೈ. ಗೋವಿಂದರಾವ್, ಕಾರ್ವಾರ್




ಘನಕಾರ್ಯ ಮಾಡಿದೆ?" ಎಂದು ಹೇಳಿ ವಿನಯದಿಂದ ಹಿಂದಕ್ಕೆ ಸರಿದು, ಮಂಚ ಹತ್ತಿ ಯಥಾಪ್ರಕಾರ ಗುಬ್ಬಚ್ಚಿಗಳನ್ನು ಓಡಿಸುವುದರಲ್ಲಿ ನಿರತಳಾದಳು.

ರಾಜಕುಮಾರನೂ ಆತನ ಪರಿವಾರವೂ ಕಾಡುಹಂದಿಯನ್ನು ಬಹುದೂರ ಓಡಿಸಿಕೊಂಡು ಬಂದಿದ್ದರಾದ್ದರಿಂದ ತುಂಬಾ ಆಯಾಸಗೊಂಡಿದ್ದರು. ಸಮೀಪದಲ್ಲಿದ್ದ ನದಿಯ ದಡದಲ್ಲಿ ವಿಶ್ರಾಂತಿ ಪಡೆಯಲು ಕುಳಿತುಕೊಂಡರು. ಹಾಗೆ ಕುಳಿತಿರುವಾಗ ಒಂದು ಕಲ್ಲು ರಿವ್ವನೆ ಬಂದು ರಾಜಕುಮಾರನ ಕದುರೆಗೆ ತಗಲಿತು. "ಯಾರದು?" ಎಂದು ಅವರು ನಾಲ್ಕು ಕಡೆಯೂ ನೋಡಿದರು. ಅವರಿಗೆ ಕವಣೆಯಿಂದ ಕಲ್ಲು ಬೀರಿ ಗುಬ್ಬಚ್ಚಿಗಳನ್ನು ಓಡಿಸುತ್ತಿದ್ದ ಕನ್ಯೆ ಕಾಣಿಸಿದಳು. ಆಗ ಪರಿವಾರದಲ್ಲೊಬ್ಬನು ಆಕೆಯ ಬಳಿಗೆ ಹೋಗಿ "ಅವ್ವಯ್ಯಾ, ನೀನು ಮಹಾಪರಾಧ ಮಾಡಿರುವೆ. ಯಾರಿದ್ದಾರೆ, ಯಾರಿಲ್ಲ ಎಂದು ನೋಡದೆ ಹೀಗೆ ಕಲ್ಲು ಬೀರುವುದೇ?" ಎಂದ. ಆಕೆ ಕೂಡಲೇ ಮಂಚದಿಂದ ಇಳಿದು ಕೆಲವು ಜೋಳದ ತೆನೆಗಳನ್ನು ಹಿಡಿದುಕೊಂಡು ಹೋಗಿ ರಾಜಕುಮಾರನ ಮುಂದಿಟ್ಟು "ನನ್ನ ತಪ್ಪನ್ನು ಕ್ಷಮಿಸಿ. ಈ ತೆನೆಗಳನ್ನು ತಿನ್ನಿರಿ" ಎಂದಳು. ರಾಜಕುಮಾರನು ನಗುತ್ತಾ "ಪರವಾಗಿಲ್ಲ" ಎಂದು, ಆಕೆಯನ್ನು ಕಳುಹಿಸಿ ಬಿಟ್ಟ.

ರಾಜಕುಮಾರನಿಗೆ ಕೋಪ ಬರಲಿಲ್ಲ ಹೌದು. ಆದರೆ ಮಿಕ್ಕವರಿಗೆ ತುಂಬಾ ಕೋಪ ಬಂತು. ಬಿಡಾರಕ್ಕೆ ಹೋಗೋಣವೆಂದು ರಾಜಕುಮಾರನೆದ್ದ. ಆತನೊಂದಿಗೆ ಪರಿವಾರವೂ ಎದ್ದಿತು. ಇನ್ನೇನು ಕುದುರೆಗಳನ್ನು ಹತ್ತಿ ಹೊರಡಬೇಕು ಅನ್ನುವಷ್ಟರಲ್ಲಿ ಆ ಕನ್ಯೆ ತಲೆಯಮೇಲೆ ಹಾಲಿನ ಮಡಿಕೆಯನ್ನಿಟ್ಟುಕೊಂಡು, ಎರಡು ಪಕ್ಕಗಳಲ್ಲಿ ಕುರಿಮರಿಗಳೊಂದಿಗೆ ಅವರಿಗೆದುರಾದಳು.

ರಾಜಕುಮಾರನ ಪರಿವಾರದಲ್ಲಿ ಒಬ್ಬನಿಗೆ ಆಕೆಯನ್ನು ಕೀಟಲೆಮಾಡಿ ಅಳಿಸಬೇಕೆಂದು ಮನಸ್ಸಾಯಿತು. ಕಡಿವಾಣವನ್ನು ಸಡಿಲಮಾಡಿ ರಿಕಾಬುಗಳಿಂದ ಕುದುರೆಯ ಪಕ್ಕಗಳನ್ನು ಬಲವಾಗಿ ಒತ್ತಿ ಅದನ್ನು ಅವಳ ಮೇಲೆ ಬಿಟ್ಟ. ಆಕೆ ಕಂಗಾರು ಬಿದ್ದು ಹೋಗುವ

ಳೆಂದೂ, ಮಡಿಕೆ ಕೆಳಗೆ ಬಿದ್ದು ಚೂರುಚೂರಾಗುವುದೆಂದೂ, ಆಗ ತಾವೆಲ್ಲಾ ನಗಬಹುದೆಂದೂ ಭಾವಿಸಿದ್ದ ಆ ರಾವುತ!

ಆದರೆ ಆ ಕನ್ಯೆ ತುಂಬಾ ಬುದ್ಧಿವಂತಳು. ಅವನ ಹಂಚಿಕೆ ತಿಳಿದುಕೊಂಡಳು. ತುಸವಾದರೂ ಹೆದರದೆ ಆ ಕುದುರೆಗೆ ಅಡ್ಡವಾಗಿ ಒಂದು ಕುರಿಮರಿಯನ್ನು ಹೋಗಬಿಟ್ಟಳು. ಆಗ ಕುದುರೆ ಬೆದರಿ, ಆ ಶೂರಶಿಖಾಮಣಿಯನ್ನು ಕೆಳಗೆ ಬೀಳಿಸಿತು. ಆ ಹುಡುಗಿ ತಾನೇನೂ ಅರಿಯದವಳಂತೆ ನಟಿಸುತ್ತಾ ತನ್ನ ದಾರಿ ಹಿಡಿದಳು.

ಇದೆಲ್ಲವನ್ನೂ ಗಮನಿಸುತ್ತಿದ್ದ ರಾಜಕುಮಾರನು ಆ ಹುಡುಗಿಯನ್ನು ಕರೆದು 'ಅವ್ವಯ್ಯಾ ನೀನು ಯಾರು?'ಎಂದು ಕೇಳಿದ.

"ನನ್ನು ಹೆಸರು ಕುರುಂದೇವಿ"

"ನಿಮ್ಮ ಕುಲ?"

"ರಜಪೂತರು ನಾವು"

"ನಿಮ್ಮಮನೆ ಎಲ್ಲಿ?"

"ಅದೋ ಅಲ್ಲಿಕಾಣುತ್ತಿರುವ ಹಳ್ಳಿಯಲ್ಲಿ"

"ಒಂದು ಸಾರಿ ನಿಮ್ಮತಂದೆಯವರನ್ನು ನಮ್ಮ ಬಿಡಾರಕ್ಕೆ ಬರುವಂತೆ ಹೇಳುವೆಯಾ?" ಎಂದ ರಾಜಕುಮಾರ. "ಉಂ, ಆಗಲಿ" ಎಂದು ಆಕೆತನ್ನ ಹಾದಿಹಿಡಿದಳು. ರಾಜಕುಮಾರನು ತನ್ನ ಪರಿವಾರದೊಂದಿಗೆ ಬಿಡಾರ ಸೇರಿದ. ಮಾರನೇಯ ದಿನ ರಾಜಕುಮಾರನ ಬಿಡಾರಕ್ಕೆ ಒಬ್ಬ ವೃದ್ಧನು ಬಂದು "ಏನಯ್ಯಾ, ನಮ್ಮ ಹುಡುಗಿಯೊಂದಿಗೆ ಹೇಳಿ ಕಳುಹಿಸಿದ್ದು ನೀನೆಯೋ?" ಎಂದ. ಆತನ ದಿಟ್ಟತನಕ್ಕೆ ರಾಜಕುಮಾರ ಬೆರಗಾದ. "ಹೌದು. ನೀವೇ ಕುರುಂದೇವಿಯ ತಂದೆ?" ಎಂದು ಕೇಳಿದ ರಾಜಕುಮಾರ. ಆ ವೃದ್ಧನು ಮಲಿನವಾದ ಚಿಂದಿಯನ್ನು ತೊಟ್ಟಿದ್ದ. ಆತನು ಕಡು ಬಡವನೆಂದು ಆತನ ವಸ್ತ್ರಗಳೇ ಸಾರುತ್ತಿವೆ. ಆದರೂ ಆತನು ತನ್ನನೆರೆತು ಹೋಗಿದ್ದ ಮೀಸೆಯನ್ನು ತಿರುವುತ್ತಾ ರಾಜಕುಮಾರನ ಪಕ್ಕದಲ್ಲಿ ಕುಳಿತುಕೊಂಡು ಮಾತಿಗಾರಂಭಿಸಿದ. ರಾಜಕುಮಾರನ ಪರಿವಾರದವರು ನೋಡಿ ಚಕಿತರಾದರು. ಆದರೆ ರಾಜಕುಮಾರನು ಆ ವೃದ್ಧನ ಸಾಹಸಕ್ಕೆ ಮೆಚ್ಚಿಕೊಂಡ. "ಅಯ್ಯಾ, ಕುರುಂದೇವಿ ನನ್ನ ರಾಣಿಯಾಗು



ವುದು ನಿಮಗೆ ಇಷ್ಟವೇ?" ಎಂದು ಕೇಳಿದ. ಆ ಮಾತು ಕೇಳಿ ಪರಿವಾರದಲ್ಲನೇಕರು: "ಏನು, ಈ ದರಿದ್ರನ ಮಗಳನ್ನು ನಮ್ಮ ರಾಜಕುಮಾರನು ವಿವಾಹವಾಗುವುದೇ' 'ಎಂದು ಮೂಗಿನಮೇಲೆ ಬೆರಳಿಟ್ಟು ಕೊಂಡರು. 'ಮಹಾಪ್ರಸಾದ, ಮಹಾಭಾಗ್ಯ' ಎಂದು ಆ ಮುದುಕನು ಕುಣಿದು ಕುಪ್ಪಳಿಸಿ ತನ್ನ ಮಗಳನ್ನು ರಾಜಪುತ್ರನಿಗೆ ಒಪ್ಪಿಸುವ ನೆಂದು ಅವರೆಲ್ಲಾ ತಿಳಿದಿದ್ದರು. ಆದರೆ ಆ ಮುದುಕ ಆ ರೀತಿ ಏನೂ ಮಾಡಲಿಲ್ಲ. ಆತನು ಯಾವೊಂದು ಉತ್ತರವನ್ನೂ ಹೇಳದೆ ಆಲೋಚನಾಮಗ್ನನಾದ.

ರಾಜಕುಮಾರನು ನಸುನಕ್ಕು "ನಾನು ಮೇವಾರ ರಾಣಾರವರ ಮಗ ಯುವರಾಜ ಹರಸಿಂಗ್" ಎಂದ. ಅದಕ್ಕೆ ಆ ವೃದ್ಧನು "ನನಗೆ ಗೊತ್ತು. ಅದರಿಂದಲೇ ಸಂದೇಹ ಪಡುತ್ತಿದ್ದೇನೆ" ಎಂದ. "ಏಕೆ ಸಂದೇಹ?" ಕುತೂಹಲದಿಂದ ಕೇಳಿದ ರಾಜಕುಮಾರ.

"ನಮಗಿರುವ ಧನವೆಂದರೆ ಶೌರ್ಯ ಮತ್ತು ಪೌರುಷಗಳು ಮಾತ್ರ. ಬೇರೇನೂ ಇಲ್ಲ" ಎಂದ ಆ ವೃದ್ಧ. "ಆಕೆಯ ಶೌರ್ಯ ಧನವನ್ನು ನೋಡಿಯೇ ನಾನು ಆಕೆಯನ್ನು ಮೆಚ್ಚಿದೆ" ಎಂದ ಯುವರಾಜ.

"ಹಾಗಾದರೆ ನನ್ನ ಅಭ್ಯಂತರವೇನಿಲ್ಲ. ಹುಡುಗಿಯ ಅಭಿಮತವನ್ನು ಕೇಳಿ ತಿಳಿದು ಕೊಂಡು ನಿಮಗೆ ಹೇಳಿ ಕಳಿಹಿಸುವೆನು" ಎಂದು ವೃದ್ಧನು ಅಲ್ಲಿಂದ ಎದ್ದು ಹೋದ.

ಅಂದು ಕರುಂದೇವಿಯನ್ನು ಬೆದರಿಸಲು ಹೋಗಿ, ಕುದುರೆಯಿಂದ ಕೆಳಗೆ ಬಿದ್ದ ಸವಾರನು ಪಕ್ಕದಲ್ಲಿದ್ದಾತನೊಂದಿಗೆ "ಈ ಮುದುಕನಿಗೆಷ್ಟು ಗರ್ವ ನೋಡಿದೆಯಾ?" ಎಂದ. ನೆರೆಯವನು "ಮೆಲ್ಲನೆ ಮಾತಾಡೋ ಮಂಕು. ಯುವರಾಜರಿಗೆ ಕೇಳಿಸಿದರೆ ನಮ್ಮ ತಲೆ ಹಾರಿಸಿ ಬಿಡುತ್ತಾರೆ. ಆತ ರಾಣಾರವರ ಬೀಗ ನಾಗುತ್ತಾನೆ ಸದ್ಯದಲ್ಲೇ" ಎಂದ.

ಅವರೆಂದುಕೊಂಡಂತೆ ಕರುಂದೇವಿಗೂ ರಾಜಕುಮಾರ ಹರಸಿಂಗನಿಗೂ ಅತಿವೈಭವ ವಾಗಿ ವಿವಾಹವಾಯಿತು. ಆ ದಂಪತಿಗಳಿಗೆ ಜನಿಸಿದಾತನೇ ಅತಿಭಯಂಕರನೆಂದು ಪ್ರಸಿದ್ಧಿ ಪಡೆದ ರಾಣಾ ಅಮರಸಿಂಗ್.






**ಪೂ**ರ್ವಕಾಲದಲ್ಲಿ ಶ್ರೀಪತಿ ಎಂಬ ಮಹಾ ಭಕ್ತನೊಬ್ಬನಿದ್ದನು. ಆತನು ಸಕಲ ಶಾಸ್ತ್ರಗಳನ್ನೂ ಅರಿತವನು. ಸಾಧುಪುಂಗವ, ವೈರಾಗ್ಯವಂತ. ಆತನ ಮಡದಿ ಶ್ಯಾಮುಲಾಂಬ. ಶ್ಯಾಮುಲಾಂಬ ಗಂಡನಿಗೆ ಅನುಕೂಲಳಾದ ಪತ್ನಿ, ಪತಿವ್ರತೆ, ಉತ್ತಮಳು.

ಆ ಪುಣ್ಯ ದಂಪತಿಗಳಿಗೆ ವರಪ್ರಸಾದದಿಂದ ಒಬ್ಬನೇ ಒಬ್ಬ ಮಗ ಜನಿಸಿದ. ಅವನಿಗೆ ಷೇಕ್ ಫರೀದ್ ಎಂದು ಲೋಕವಿಲಕ್ಷಣವಾದ ಹೆಸರಿಟ್ಟು, ಅತಿ ಮಮತೆಯಿಂದ ಸಾಕುತ್ತಿದ್ದರು.

ಹೀಗೇ ಇರಲು ಒಂದು ದಿನ ದೇವರ ಪೂಜೆಗಾಗಿ ಹೂ ಕಿತ್ತುಕೊಂಡು ಬರಲು ಶ್ರೀಪತಿ ಅಡವಿಗೆ ಹೋದನು. ಅಲ್ಲಿ ವಿಷಸರ್ಪವೊಂದು ಆತನನ್ನು ಕಚ್ಚಿಬಿಟ್ಟಿತು. ಶ್ರೀಪತಿ ಬೇಗಬೇಗನೆ ಮನೆಸೇರಿ, ಸ್ನಾನ ಮುಗಿಸಿ, ಭಗವಧ್ಯಾನ ಮಾಡಿ, ತುಳಸಿ ತೀರ್ಥವನ್ನು ತೆಗೆದುಕೊಂಡು, ಹೆಂಡತಿಯನ್ನು ಹತ್ತಿರಕ್ಕೆ ಕರೆದು ನಡೆದ ವಿಷಯವನ್ನು ತಿಳಿಸಿ, ಆಕೆಗೆ ಪರಮಾರ್ಥ ತತ್ವವನ್ನು ಉಪದೇಶ ಮಾಡಿದನು. ಆ ತರುವಾಯ ತನ್ನ ಮೂರು ವರ್ಷದ ಕಂದನನ್ನು ಅಪ್ಪಿ ಆಶೀರ್ವಾದ ಮಾಡಿ, ಸ್ವರ್ಗಸ್ಥನಾದನು.

'ವಿಧಿವಿಲಾಸಕ್ಕೆ ಯಾರು ಎದುರು ನಿಲ್ಲಬಲ್ಲರು' ಎಂದುಕೊಂಡು, ಶ್ಯಾಮುಲಾಂಬ ತನ್ನ ದುಃಖವನ್ನು ನುಂಗಿಕೊಂಡು ಮಗನನ್ನು ಐದುವರ್ಷಗಳ ವರೆವಿಗೆ ಅತಿ ಜಾಗರೂಕತೆಯಿಂದ ಬೆಳೆಸಿದಳು. ಷೇಕ್ ಫರೀದ್ ಹರಿನಾಮ ಸಂಕೀರ್ತನೆಗಳಲ್ಲಿ ಭಾಗವಹಿಸಿ, ತಂದೆಯಂತೆಯೇ ಮಹಾಭಕ್ತನಾದ. ಬಾಲಭಕ್ತನಾದ ಷೇಕ್ ಫರೀದ್ ಒಂದು ದಿನ ತಾಯಿಯ ಹತ್ತಿರ ಹೋಗಿ "ಅಮ್ಮಾ, ಭಗವಂತನನ್ನು ಎಲ್ಲರೂ ಅನೇಕ ರೀತಿಯಾಗಿ ವರ್ಣಿಸಿ ಹೊಗಳುತ್ತಾರೆ. ಆದರೆ ಆತ ನನಗೇಕೆ ಕಾಣಿಸುವುದಿಲ್ಲ?" ಎಂದು ಪ್ರಶ್ನೆ ಮಾಡಿದ. ಅದಕ್ಕೆ ಆಕೆ "ಮಗೂ ತಪಸ್ಸು ಮಾಡಿದವರಿಗೆ ಆತನು ಪ್ರತ್ಯಕ್ಷನಾಗುವನೆಂದು ಹಿರಿಯರು ಹೇಳುತ್ತಾರೆ" ಎಂದಳು.

ಎಂ. ಕಲ್ಯಾಣಿ, ಚಿತ್ರದುರ್ಗ




ಅದನ್ನು ಕೇಳಿ ಆ ಬಾಲಕನು ಲೌಕಿಕ ವಿಚಾರಗಳನ್ನು ದೂರಮಾಡಿ, ಅರಣ್ಯದಲ್ಲಿ ಘೋರ ತಪಸ್ಸನ್ನು ಮಾಡಲು ಹೊರಟ. ಹಾಗೆ ಹೋಗಲು ಸಿದ್ದನಾಗುತ್ತಿದ್ದ ಮಗನನ್ನು ಕಂಡು ಶ್ಯಾಮಲಾಂಬ ಮಮತೆಯಿಂದ ರೊಟ್ಟಿ ಮಾಡಿಕೊಟ್ಟಳು. ಆದರೆ ಆಕೆ ಆ ರೊಟ್ಟಿಗೆ ಉಪ್ಪುಹಾಕದೆ ಸಪ್ಪೆಯಾಗಿ ಮಾಡಿ ಕೊಟ್ಟಳು. ತಾಯಿ ಕೊಟ್ಟ ಆ ರೊಟ್ಟಿಯನ್ನು ಸೊಂಟಕ್ಕೆ ಕಟ್ಟಿಕೊಂಡು ಫರೀದ್ ಅರಣ್ಯದ ಹಾದಿ ಹಿಡಿದ.

ಅರಣ್ಯದಲ್ಲಿ ಆತನು ತೀವ್ರವಾದ ತಪಸ್ಸಿಗೆ ಆರಂಭಿಸಿದ. ಹಸಿವಿನ ಬಾಧೆ ಅತಿಯಾದರೆ ತಾಯಿ ಪ್ರೀತಿಯಿಂದ ಕೊಟ್ಟ ರೊಟ್ಟಿಯನ್ನು ತಿನ್ನಬಹುದೆಂದು ಯೋಚಿಸಿದ್ದ. ಆದರೆ ಹೇಗೋ ಆತನು ರೊಟ್ಟಿಯ ವಿಷಯವನ್ನು ಮರತೇಬಿಟ್ಟ. ಮರದೆಲೆಗಳನ್ನೂ ಕಂದ ಮೂಲಗಳನ್ನೂ ತಿಂದು ತನ್ನ ಹಸಿವಿನ ಬಾಧೆಯನ್ನು ಇಂಗಿಸಿಕೊಂಡು ಬಹುಕಾಲ ತಪಸ್ಸು ಮಾಡಿದ. ಭಗವಂತ ಪ್ರತ್ಯಕ್ಷನಾಗಲಿಲ್ಲ.

ಒಂದುದಿನ ವರ್ತಕನೊಬ್ಬನು ಯಾವುವೋ ಮೂಟೆಗಳನ್ನು ಗಾಡಿಯಲ್ಲಿ ಹೇರಿಸಿಕೊಂಡು ಆ ದಾರಿಯಲ್ಲಿ ಹೋಗುತ್ತಿದ್ದ. ಆತನಿಗೆ ಬಳಲಿಕೆಯಾಗಿರಬೇಕು. ಸ್ವಲ್ಪ ವಿಶ್ರಮಿಸಿಕೊಳ್ಳಲು ಅಲ್ಲೇ ಒಂದು ಮರದ ಕೆಳಗೆ ಕುಳಿತುಕೊಂಡ. ಫರೀದ್ ಆತನಿಗೆ ಕೆಲವು ಕುಶಲ ಪ್ರಶ್ನೆಗಳನ್ನು ಹಾಕಿ, ಮೂಟೆಗಳ ಕಡೆ ದೃಷ್ಟಿ ಬೀರಿದ.

'ಅವೆಲ್ಲಾ ಸಕ್ಕರೆಯ ಮೂಟೆಗಳಾಗಿದ್ದರೆ ಎಷ್ಟು ಚೆನ್ನು! ನನ್ನ ಹತ್ತಿರವಿರುವ ರೊಟ್ಟಿಯನ್ನು ಅದ್ದಿಕೊಂಡು ತಿನ್ನಬಹುದು' ಎಂದು ಯೋಚಿಸಿದ. ಫರೀದ್ ಆ ವರ್ತಕನನ್ನು ಕುರಿತು "ಆ ಮೂಟೆಗಳಲ್ಲಿ ಏನಿರುವುದಪ್ಪಾ?" ಎಂದು ಕೇಳಲು, ಆತನು "ಓ, ಅವೇ? ಎಲ್ಲಾ ಮರಳಿನ ಮೂಟೆಗಳು" ಎಂದು ಉತ್ತರವಿತ್ತ. ಸ್ವಲ್ಪ ಹೊತ್ತಾದ ನಂತರ ಆ ವರ್ತಕನು ತನ್ನ ಮನೆಯ ಕಡೆ ಹೊರಟ. ಮನೆಗೆ ಹೋಗಿ ಮೂಟೆಗಳನ್ನು ಬಿಚ್ಚಿ ನೋಡಲು ಸಕ್ಕರೆಗೆ ಬದಲು ಮರಳಿದೆ!

ತತ್‌ಕ್ಷಣ ಆ ವರ್ತಕನು ಗಲ್ಲಗಲ್ಲ ಬಡಿದುಕೊಳ್ಳುತ್ತಾ ತನ್ನ ಮೂಟೆಗಳೊಂದಿಗೆ ಫರೀದ್ ಹತ್ತಿರಕ್ಕೆ ಬಂದು, ಆತನ ಪಾದಗಳ ಮೇಲೆ

ಬಿದ್ದು "ಮಹಾತ್ಮನೇ, ನನ್ನ ಸಕ್ಕರೆಮೂಟೆಗಳೆಲ್ಲಾ ಮರಳಿನ ಮೂಟೆಗಳಾಗಿ ಬದಲಾಯಿಸಿವೆ. ಪರಿಹಾಸ್ಯವಾಗಿ ನುಡಿದುದಕ್ಕೆ ತಕ್ಕ ಶಾಸ್ತಿ ಆಯಿತು. ನನ್ನ ಅಪರಾಧವನ್ನು ಕ್ಷಮಿಸಿ, ನನ್ನನ್ನು ಉದ್ಧಾರ ಮಾಡಬೇಕು" ಎಂದು ಬೇಡಿಕೊಂಡ. ಅದಕ್ಕೆ ಫರೀದ್ "ಅಪ್ಪಾ, ನನಗೇನೂ ತಿಳಿಯದು" ಎಂದು ಪರಿಪರಿ ವಿಧದಲ್ಲಿ ವರ್ತಕನಿಗೆ ಹೇಳಿ ನೋಡಿದ. ಆದರೆ ವರ್ತಕನು ಅದನ್ನು ನಂಬಲಿಲ್ಲ.

ಆಗ ಫರೀದ್ ವರ್ತಕನೊಂದಿಗೆ "ಅಪ್ಪಾ, ನನ್ನ ಮಾತಿನಿಂದ ನಿಜವಾಗಿ ನಿನ್ನ ಸಕ್ಕರೆ ಮರಳಾಗಿ ಬದಲಾಯಿಸಿತೆ? ಹಾಗೆ ಅಗಿದ್ದ ಪಕ್ಷಕ್ಕೆ ಶ್ರೀ ಹರಿಯ ಕೃಪೆಯಿಂದ ಈಗ ಈ ಮರಳು ಸಕ್ಕರೆಯಾಗಿ ಬದಲಾಯಿಸಲಿ" ಎಂದು ಹೇಳಿದ. ಕೂಡಲೇ ಆ ಮರಳಿನ ಮೂಟೆಗಳು ಯಥಾ ಪ್ರಕಾರ ಸಕ್ಕರೆಯ ಮೂಟೆಗಳಾದವು. ವರ್ತಕನು ಸಂತೋಷಗೊಂಡು ಫರೀದ್‌ಗೆ ಸಾಕಷ್ಟು ಸಕ್ಕರೆ ಕೊಟ್ಟು ತನ ಮನೆಗೆ ಹಿಂತಿರುಗಿದ.

ಆ ತರುವಾಯ ಷೇಕ್‌ಫರೀದ್ ಮತ್ತಷ್ಟು ಕಠಿನ ನಿಯಮಗಳಿಂದ ತಪಸ್ಸು ಮಾಡಲು ಪ್ರಾರಂಭಿಸಿದ. ಆದರೂ ದೇವರ ದರ್ಶನವಾಗಲಿಲ್ಲ. ಶ್ರೀ ಹರಿಯ ಕೃಪೆಯುಂಟಾಗದಿರಲು ಖಿನ್ನನಾಗಿ, ಫರೀದ್ ಮನೆಗೆಹೋಗಿ ತಾಯಿಯ ಮುಂದೆ ಹೇಳಿಕೊಂಡು ಅತ್ತನು.

ಆಗ ತಾಯಿ, ಶ್ಯಾಮಲಾಂಬ ವಿಷಯವನ್ನೆಲ್ಲಾ ಕೇಳಿ ತಿಳಿದುಕೊಂಡು, ಮಗನ




ತಲೆಯನ್ನು ನೇವರಿಸುತ್ತಾ, ಜಡೆ ಕಟ್ಟಿದ್ದ ಆತನ ತಲೆಯ ಒಂದು ಜಡೆಯನ್ನು ಹಿಡಿದು ಎಳೆದಳು. ಆಗ ಫರೀದ್ "ಅಮ್ಮಾ, ಈಗಾಗಲೇ ನಾನು ಅರ್ಧ ಸತ್ತು ಸುಣ್ಣವಾಗಿದ್ದೇನೆ, ನನಗೇಕೆ ಹಿಂಸೆಕೊಡುವೆ?" ಎಂದು ಬೇಸರದಿಂದ ನುಡಿದ.

ಆಗ ಜ್ಞಾನಿ ಶ್ಯಾಮಲಾಂಬ "ಮಗೂ, ಒಂದು ಸಣ್ಣ ಜಡೆ ಹಿಡಿದೆಳೆವರೆ ನಿನಗೆ ನೋವಾಯಿತು. ನೀನು ತಪಸ್ಸು ಮಾಡುವಾಗ ನಿನ್ನ ಆಹಾರಕ್ಕಾಗಿ ಮರದಿಂದ ಒಂದೊಂದು ಎಲೆ ಕಿತ್ತಾಗ ಅವುಗಳಿಗೆಷ್ಟು ಬಾಧೆಯಾಗಿರಬೇಕು? ನೀನೇ ಆಲೋಚಿಸಿ ನೋಡು. ನೀನು ಮಾಡಿದ ತಪಸ್ಸು ಹಿಂಸೆಯಿಂದ ಕೂಡಿದುದಾಗಿದೆ. ಅಷ್ಟೇ ಅಲ್ಲ. ತಪಸ್ಸು ಮಾಡು

ತ್ತಿದ್ದರೂ ಸಹ ನಿನಗೆ ರೊಟ್ಟಿಯ ರುಚಿ ಮತ್ತು ಸಕ್ಕರೆಯ ಸವಿ ಮನಸ್ಸಿನಲ್ಲಿ ಮರುಕಳಿಸು ತಲಿತ್ತು. ಹಾಗಿರಲು ಭಗವಂತನು ಹೇಗೆತಾನೇ ನಿನಗೆ ಪ್ರಸನ್ನನಾಗುವನು?" ಎಂದಳು.

ಆ ಕೂಡಲೇ ಫರೀದ್ ತಾಯಿಯ ಉಪ ದೇಶದಂತೆ ಮತ್ತೆ ಅಡವಿಗೆ ಹೋದ. ಅಲ್ಲಿ ಕದಲ ಮೆದಲದೆ, ಬಿಸಿಲಿನ ತಾಪಕ್ಕೆ ಒಣ ಗುತ್ತಾ, ಮಳೆಯ ಹೊಡೆತಕ್ಕೆ ನೆನೆಯುತ್ತಾ ದೀಕ್ಷೆಯಿಂದ ತಪಸ್ಸು ಸಾಗಿಸುತಲಿದ್ದ. ಆಗ ಭಗವಂತನು ಪ್ರಸನ್ನನಾಗಿ "ಮಗೂ, ನೀನು ಮನೆಗೆ ಹಿಂತಿರುಗಿ, ಸದ್ಗುರುಗಳನ್ನು ಆಶ್ರ ಯಿಸಿ, ಅವರ ಅನುಗ್ರಹಕ್ಕೆ ಪಾತ್ರನಾಗು. ನಾನು ಸದಾ ನಿನ್ನ ಹತ್ತಿರದಲ್ಲೇ ಇರುವೆನು" ಎಂದು ಹೇಳಿ ಅಂತರ್ಧಾನ ಹೊಂದಿದ.

ಫರೀದ್ ಕೂಡಲೇ ಮನೆಗೆ ಹೋಗಿ ನಡೆ ದುದನ್ನೆಲ್ಲಾ ತನ್ನ ತಾಯಿಗೆ ತಿಳಿಸಿದ. ಆಕೆಯ ಸಂತೋಷವು ಅಷ್ಟಿಷ್ಟಲ್ಲ.

ಆ ತರುವಾಯ ಫರೀದ್ ದ್ವಾರಕ ಮೊದ ಲಾದ ಪುಣ್ಯಸ್ಥಳಗಳಿಗೆ ಹೊರಟು, ಭಗವ ದ್ಭಕ್ತರ ದಿವ್ಯದರ್ಶನ ಮಾಡುತ್ತಾ, ಕೆಲವು ಕಾಲಾನಂತರ ಮನೆಗೆ ಹಿಂತಿರುಗಿ ತನ್ನ ತಾಯಿ ಯೊಂದಿಗೆ ಸುಖವಾಗಿದ್ದ.

ಹೀಗೇ ಇರಲು ಆ ದೇಶದ ರಾಜನು ಫರೀ ದನ ಮನೆಗೆ ಬಂದು ತನಗೆ ಒದಗಿದ ಕಠಿನ ವ್ಯಾಧಿಯನ್ನು ಗುಣಪಡಿಸುವಂತೆ ಕೇಳಿ ಕೊಂಡ. ಆಗ ಫರೀದ್ ರಾಜನ ಸರ್ವಾಂಗ ವನ್ನೂ ತನ್ನ ಕೈಯಿಂದ ಸ್ಪರ್ಶಿಸಲು, ಆ ಕ್ಷಣವೇ ಆತನ ರೋಗವು ಗುಣವಾಯಿತು.

ಆ ರಾಜನು ಧನಕನಕಾದಿಗಳಿಂದ ಫರೀದ್ ನನ್ನು ಗೌರವಿಸಬೇಕೆಂದಿರಲು ಆತನು 'ಒಲ್ಲೆ' ಎಂದ. "ಹಾಗಾದರೆ ನಾನು ಪ್ರಾಣತ್ಯಾಗ ಮಾಡುತ್ತೇನೆ" ಎಂದು ರಾಜ ಹಠ ಹಿಡಿದ. ಸಮಸ್ಯೆ ಉಭಯ ಸಂಕಟಕ್ಕಿಟ್ಟುಕೊಂಡಿತು. ಆ ರಾತ್ರಿ ಪಾಂಡುರಂಗನು ಫರೀದನ ಕನಸಿನಲ್ಲಿ ಕಾಣಿಸಿಕೊಂಡು ರಾಜನು ಕೊಡುವ ಕಾಣಿಕೆ ಗಳನ್ನು ಸ್ವೀಕರಿಸುವಂತೆ ಆತನಿಗೆ ಹೇಳಿದನು. ಆಗ ಆತನು ರಾಜನಿತ್ತ ಹಣವನ್ನು ಸ್ವೀಕರಿಸಿ, ಭಾಗವತರಿಗೆಲ್ಲಾ ಸಮಾರಾಧನೆ ಮಾಡಿಸಿದ.



# ಕಳ್ಳಹಕ್ಕಿ

ಬ್ರಿಟನ್ನಿನಲ್ಲಿ ಒಂದು ವಿಚಿತ್ರವಾದ ಪಕ್ಷಿ ಇದೆ. ಅದರ ರೂಪ ನಮ್ಮ ದೇಶದ ಕಾಗೆಯಂತಿದೆ. ಅದಕ್ಕೆ ಸಮಾಜದಲ್ಲಿ ಕಲಿತು ಓಡಾಡುವ ಗುಣವಿದೆ. ಧ್ವನಿ ಅನುಕರಿಸುವುದರಲ್ಲಿ ಅದು ತುಂಬಾ ಚೂಟಿ. ಅಭ್ಯಾಸ ಮಾಡಿಸಿದರೆ ಅದು ನಮ್ಮಂತೆಯೇ ಮಾತನಾಡ ಬಲ್ಲದು. ಇದರ ಹೆಸರು ಜಾಕ್‌ಡಾ.

ಇದಕ್ಕೆ ಹೊಳೆಯುವ ವಸ್ತುಗಳೆಂದರೆ ತುಂಬಾ ಮೋಜು. ಯಾವ ಮೂಲೆಯಲ್ಲಿ ಯಾವುದೇ ಪ್ರಕಾಶಮಾನವಾಗಿ ಹೊಳೆಯುತ್ತಿದ್ದರೂ ಅದನ್ನು ಕೊಕ್ಕಿನಿಂದ ಕಚ್ಚಿಕೊಂಡು ಹೋಗಿ ತನ್ನ ಗೂಡಿಗೆ ಸೇರಿಸುವುದುಂಟು.



ಅಲ್ಲಿನ ಜನ ಮುಖ್ಯವಾಗಿ ನಾಣ್ಯಗಳ ವಿಷಯದಲ್ಲಿ ಅತಿ ಜಾಗರೂಕತೆಯಿಂದ ಇರುತ್ತಾರೆ. ಏಕೆಂದರೆ ಈ ಹಕ್ಕಿ ಹೊಳೆಯುವ ನಾಣ್ಯಗಳನ್ನು ಎತ್ತಿಕೊಂಡು ಹಾರಿ ಹೋಗುವುದುಂಟು. ಅನೇಕಸಾರಿ ಜಾಕ್‌ಡಾ ಗೂಡುಗಳಲ್ಲಿ ನಾಣ್ಯಗಳು ಸಿಗುವುದುಂಟು. ಆದುದರಿಂದಲೇ ಆ ದೇಶಸ್ಥರು ಈ ಕಳ್ಳಹಕ್ಕಿಯನ್ನು ನಂಬುವುದಿಲ್ಲ. ಒಂದು ಕಣ್ಣಿಂದ ಇದನ್ನು ಗಮನಿಸುತ್ತಲೇ ಇರುತ್ತಾರೆ. ಈ ಹಕ್ಕಿ ಹೊಳೆಯುವ ವಸ್ತುಗಳನ್ನು ತೆಗೆದುಕೊಂಡು ಹೋಗಿ ಎಲ್ಲೆಂದರಲ್ಲಿ ಇಡುವುದರಿಂದ ಅನೇಕ ಅಮಾಯಕರು ಕಳ್ಳನಾಮವನ್ನು ಇಟ್ಟುಕೊಂಡಿರುವ ತಪ್ಪಿಗೆ ಗುರಿಯಾಗುವುದುಂಟು. ಓದುತ್ತಿರುವವರ ಕನ್ನಡಕಗಳನ್ನೂ ಹಾರಿಸಿಕೊಂಡು ಹೋಗುವುದು ಈ ಜಾಕ್‌ಡಾ.

ಮತ್ತೊಂದು ವಿಷಯ: ಬೆಂಕಿ ಪ್ರಜ್ವಲಿಸುವುದಷ್ಟೆ. ಕೆಲವುಬಾರಿ ಬೆಂಕಿಯ ಕಿಡಿಗಳನ್ನು ಇದು ಕೊಕ್ಕಿನಿಂದ ಕಚ್ಚಿಕೊಂಡು ಹೋಗಿ ಮನೆಯ ಮೇಲು ಛಾವಣಿಯ ಮೇಲೆ ಇಡುವುದು. ಅದರಿಂದ ಮನೆಗಳು ಸುಟ್ಟು ಭಸ್ಮವಾಗುವುದುಂಟು.

ಜಾಕ್‌ಡಾಗೆ ಸಹನೆ, ತಾಳ್ಮೆಗಳಿವೆ. ಗೂಡಿಗಾಗಿ ಸಣ್ಣಸಣ್ಣ ಕಡ್ಡಿಗಳನ್ನು ತಂದು ಒಂದೊಂದಾಗಿ ಜೋಡಿಸುವುದು. ಈ ಪಕ್ಷಿಯ ನಿವಾಸಸ್ಥಳಗಳೆಂದರೆ ಗುಡ್ಡ, ಹಾಳುಬಿದ್ದ ಗೋಡೆಗಳು, ತೊಗ್ರೆಗಳು. ಈ ಪಕ್ಷಿ ಕುರಿಗಳ ಮೇಲೆ ಎರಗಿ, ತನ್ನ ಗೂಡಿಗೆ ಉಪಯೋಗಿಸಲು ಅದರ ಉಣ್ಣೆಯನ್ನು ಕೀಳುವುದುಂಟು.



# ಗೂನು ಕುದುರೆ

ಒಬ್ಬ ರೈತನಿಗೆ ಮೂವರು ಕುಮಾರರಿದ್ದರು. ಹಿರಿಯವರಿಬ್ಬರೂ ತುಂಬಾ ಚುರುಕು. ಮೂರನೇಯವನು ಮಂದಮತಿ. ಸದಾ ಉಗುರು ಕಡಿಯುತ್ತಾ ಕುಳಿತಿರುವನು.

ಒಂದುದಿನ ರೈತನು ತನ್ನ ಮಕ್ಕಳನ್ನು ಕರೆದು ಹೊಲದಲ್ಲಿ ಬೀಜಬಿತ್ತಿ ಬರುವಂತೆ ಹೇಳಿದ. ಹಿರಿಯವರಿಬ್ಬರೂ ಹೊಲಕ್ಕೆಹೋಗಿ ಬೀಜ ಚೆಲ್ಲಿ ಬಂದರು. ಮಂದಮತಿ ಮಾತ್ರ ಉಗುರು ಕಡಿಯುತ್ತಾ ಮನೆಯಲ್ಲೇ ಇದ್ದ.

ಕೆಲವು ದಿನಗಳಿಗೆಲ್ಲಾ ಬೀಜಗಳು ಮೊಳಕೆಯಾಗಿ ಸೊಂಪಾಗಿ ಬೆಳೆಯುತ್ತಿದ್ದುವು. ಆದರೆ ಒಂದು ದಿನ ರೈತನು ಹೊಲಕ್ಕೆ ಹೋಗಿ ನೋಡಲು ಅದೆಲ್ಲಾ ಧ್ವಂಸವಾಗಿತ್ತು. ಯಾವುದೋ ಪ್ರಾಣಿ ಹೊಲವನ್ನೆಲ್ಲಾ ತುಳಿದು ಹಾಳು ಮಾಡಿರುವಂತೆ ತೋರಿಬಂತು. ರೈತ ಕ್ಷುಬ್ಧನಾದ. ಮಕ್ಕಳನ್ನು ಕೂಗಿ ಮತ್ತೆ ಬೀಜ ಎರಚಿ ಕಾವಲು ಕಾಯುವಂತೆ ಹೇಳಿದ.

ಹಿರಿಯವರಿಬ್ಬರೂ ಮತ್ತೆ ಹೊಲದಲ್ಲಿ ಬೀಜ ಚೆಲ್ಲಿದರು. ಮೊಳಕೆ ಬರುತ್ತಿತ್ತು. ಒಂದುದಿನ ಹಿರಿಯವನು ಕಾವಲು ಕಾಯಲು ಹೋದ. ಅವನು ಬಹಳ ಹೊತ್ತು ಎಚ್ಚರವಾಗಿದ್ದ. ಆದರೆ ಆತನಿಗೆ ನಡು ರಾತ್ರಿಯಲ್ಲಿ ಒಳ್ಳೇ ನಿದ್ರೆ ಬಂದುಬಿಟ್ಟಿತು. ಬೆಳಗಿನಲ್ಲೆದ್ದು ನೋಡಿದಾಗ ಹೊಲವೆಲ್ಲಾ ಹಾಳಾಗಿತ್ತು.

ಹಿರಿಯವರಿಬ್ಬರೂ ಮತ್ತೆ ಬೀಜ ಬಿತ್ತಿದರು. ಪೈರು ಬೆಳೆಯುವ ವೇಳೆಗೆ ಎರಡನೇಯವನು ಕಾಯುವ ಸರದಿ ಬಂತು. ಅವನೂ ಸಹ ಅರ್ಧರಾತ್ರಿವೇಳೆಗೆ ನಿದ್ದೆಹೋಗಬೇಕೇ? ಬೆಳಗ್ಗೆ ನೋಡಿದಾಗ ಪೈರೆಲ್ಲಾ ನಾಶವಾಗಿದೆ!

ಈಸಾರಿ ಹಾಳಾಗಿದ್ದ ಪ್ರದೇಶದಲ್ಲಿ ಮಾತ್ರ ಬೀಜ ಬಿತ್ತಿದರು. ಈಗ ಹೊಲ ಕಾಯುವ ಸರದಿ ಮೂರನೆಯವನ ಪಾಲಿಗೆ ಬಂದಿತು. ಅವನು ಹೊತ್ತು ಹೋಗುವ ಮೊದಲೇ ಮಲಗಿಕೊಳ್ಳುವ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದ. ಮರದ ರೆಂಬೆಗಳನ್ನು ಕಡಿದು ತಂದು ಜೋಡಿಸಿ, ಹಾಸಿಗೆ ಹಾಸಿಕೊಂಡ. ಅದರ ಮೇಲೆ ನಡುವಾಲಿಸಿ ಕಣ್ಣುಮುಚ್ಚಿದ. ರೆಂಬೆಗಳಿಗಿದ್ದ ಕೆಲವು ಮುಳ್ಳುಗಳು ಆಗಾಗ

ಎಸ್. ಕರುಣಾಕರ, ಬೆಂಗಳೂರು

ಚುಚ್ಚುತ್ತಿದ್ದವು. ಆವನಿಗೆ ನಿದ್ರೆ ಬರಲಿಲ್ಲ. ಹಾಸಿಗೆ ಸರಿಮಾಡಿಕೊಳ್ಳಲು ಎದ್ದ. ಆಗ ಹೊಲದಲ್ಲಿ ಒಂದು ಕುದುರೆ ಕಾಣಿಸಿತು.

'ಓಹೋ, ನಮ್ಮ ಹೊಲ ಹಾಳು ಮಾಡುತ್ತಿರುವುದು ನೀನೆಯೋ? ಇರು, ನಿನಗೆ ಶಾಸ್ತಿ ಮಾಡುತ್ತೇನೆ' ಎಂದು ಮಂದಮತಿ ಮೆಲ್ಲಗೆ ಹೋಗಿ ಆ ಕುದುರೆಯ ಮೇಲೆ ಬಿದ್ದ. ತಟಾಲನೆ ಆ ಕುದುರೆ ಆಕಾಶಕ್ಕೆ ಎಗರಿತು. ಆದರೆ ಮಂದಮತಿಯ ಕೈಗೆ ಅದರ ಬಾಲ ಸಿಕ್ಕಿಕೊಂಡಿತು. ಅದನ್ನು ಅವನು ಗಟ್ಟಿಯಾಗಿ ಹಿಡಿದುಕೊಂಡ. ಬಿಡಲೇ ಇಲ್ಲ.

ಕುದುರೆ ಗಾಳಿಯಲ್ಲಿ ತೇಲಿಹೋಗಿ ಮೂರು ಸಮುದ್ರಗಳ ಆಚೆ ನೆಲಕ್ಕಿಳಿದು "ನನ್ನನ್ನು ಬಿಟ್ಟುಬಿಡು. ನಾನು ಇನ್ನುಮುಂದೆ ನಿಮ್ಮ ಹೊಲದ ತಂಟೆಗೆ ಬರುವುದಿಲ್ಲ" ಎಂದಿತು.

"ನಿನ್ನನ್ನು ನಂಬಲಾರೆ. ನೀನು ನಮಗೆ ಬಹಳ ನಷ್ಟವನ್ನುಂಟು ಮಾಡಿರುವೆ. ಅದರ ಮಾತೇನು?" ಎಂದ ಮಂದಮತಿ.

"ನಷ್ಟಪರಿಹಾರಕ್ಕಾಗಿ ನನ್ನ ಮರಿಗಳನ್ನು ಕೊಡುವೆನು" ಎಂದಿತು ಕುದುರೆ.

"ಮೊದಲು ನನ್ನನ್ನು ಮನೆಗೆ ಸೇರಿಸು. ತರುವಾಯ ಯೋಚಿಸಿ ಹೇಳುತ್ತೇನೆ" ಎಂದ ಮಂದಮತಿ. ಆ ಕುದುರೆ ಮಂದಮತಿಯನ್ನು ಬೆನ್ನಿನ ಮೇಲೇರಿಸಿಕೊಂಡು ಹೋಗಿ ಆತನ ಮನೆಯ ಹತ್ತಿರ ಇಳಿಸಿತು.

"ನನ್ನ ಮರಿಗಳನ್ನು ಕೊಡುವ ವರೆವಿಗೆ ನನ್ನ ಕಡಿವಾಣ ನಿನ್ನ ಹತ್ತಿರವಿರಲಿ" ಎಂದು




ಹೇಳಿ ಹಾರಿಹೋಯಿತು. ಈ ವಿಷಯವನ್ನು ಮಂದಮತಿ ತನ್ನ ತಂದೆಗೆ ತಿಳಿಸಲೇ ಇಲ್ಲ.

ಅವನು ಅಂದಿನಿಂದ ಅಡವಿಗೆ ಹೋಗಿ ಕುದುರೆ ಮರಿಗಳಿಗಾಗಿ ಲಾಯಗಳನ್ನು ಸಿದ್ಧ ಮಾಡುವುದರಲ್ಲಿ ನಿರತನಾದ. ಈ ಬಾರಿ ಹೊಲಹಾಳಾಗದೆ ಇರುವುದನ್ನು ಕಂಡು ರೈತ ಸಂತಸ ಗೊಂಡ.

ಲಾಯಗಳು ಸಿದ್ಧವಾಗುವ ವೇಳೆಗೆ ಮೂರು ಕುದುರೆ ಮರಿಗಳು ಬಂದವು. ಎರಡು ತುಂಬಾ ಚುರುಕಾಗಿದ್ದವು. ಅವುಗಳಿಗೆ ಬೆಳ್ಳಿಯ ಗೊರಸುಗಳು; ಅವುಗಳ ಶರೀರ ಛಾಯೆ ಬಂಗಾರದ ಬಣ್ಣ. ಮೂರನೆಯ ಕುದುರೆಗೆ ಮಾತ್ರ ಎರಡು ಡುಬ್ಬಗಳಿದ್ದವು. ಅವುಗಳ ಮಧ್ಯೆ ಜೀನು ಇಲ್ಲದೆಯೇ ಕುಳಿತು




ಕೊಂಡು ಸವಾರಿ ಮಾಡ ಬಹುದು. ಈ ಕುದುರೆ ಎಂದರೆ ಮಂದಮತಿಗೆ ಪ್ರಾಣ.

ತಮ್ಮ ತಮ್ಮ ಎಲ್ಲಿಂದಲೋ ಮೂರು ಕುದುರೆಗಳನ್ನು ತಂದಿರುವುದನ್ನು ಕಂಡು ಅಣ್ಣಂದಿರಿಬ್ಬರೂ 'ಈ ಕುದುರೆಗಳನ್ನು ರಾಜನಿಗೆ ಮಾರಿದರೆ ತುಂಬಾ ಹಣ ಬರುತ್ತದೆ' ಎಂದು ಯೋಚಿಸಿದರು. ಈ ವಿಷಯವನ್ನು ಮಂದಮತಿಗೆ ಹೇಳಲು, ಆತನೂ ಒಪ್ಪಿಕೊಂಡ. ಮೂವರೂ ಮೂರು ಕುದುರೆಗಳನ್ನೇರಿ, ರಾಜನ ಅರಮನೆಗೆ ಹೋದರು.

ಚಿನ್ನದ ಛಾಯೆಯುಳ್ಳ ಕುದುರೆಗಳನ್ನು ನೋಡಿ ರಾಜ ಮಾರು ಹೋದನು. "ಅಪ್ಪಾ, ಈ ಕುದುರೆಗಳ ಬೆಲೆ ಏನು?" ಎಂದು ಕೇಳಿದ. ಆದಕ್ಕೆ ಉತ್ತರವಾಗಿ "ಬೆಲೆ ಎಷ್ಟೆಂದು ಹೇಳಬಲ್ಲೆವು ಪ್ರಭೂ, ತಮ್ಮ ಚಿತ್ತಕ್ಕೆ ತೋರಿದಂತೆ ಕೊಡಿ" ಎಂದ ಮಂದಮತಿ.

ಈ ಕುದುರೆಗಳನ್ನು ನೋಡಿದ ಕೂಡಲೇ ಆಸ್ಥಾನದಲ್ಲಿದ್ದ ಅಶ್ವಪಾಲಕನು "ಪ್ರಭೂ, ಇಂತಹ ಭಾರಿ ಅಶ್ವಗಳನ್ನು ಸಾಕಲು ನನ್ನಿಂದ ಸಾಧ್ಯವಿಲ್ಲ. ಇವುಗಳನ್ನು ತಂದಾತನನ್ನೇ ನೋಡಿಕೊಳ್ಳಲು ನಿಯಮಿಸಿ" ಎಂದ.

ಮಂದಮತಿಗೆ ಸಂತೋಷವಾಯಿತು. "ನಾನೂ ಸಹ ಇಲ್ಲೇ ಇರುವ ಪಕ್ಷಕ್ಕೆ ಈ ಕುದುರೆಗಳನ್ನು ಮಹಾಪ್ರಭುಗಳು ಉಚಿತವಾಗಿಯೇ ತೆಗೆದುಕೊಳ್ಳಬಹುದು" ಎಂದ. ರಾಜ ಈ ಮಾತುಗಳನ್ನು ಕೇಳಿ ಮತ್ತಷ್ಟು ಆನಂದಗೊಂಡ. ಮಂದಮತಿಯು ಅಣ್ಣಂದಿರಿಗೆ ಸ್ವಲ್ಪ ಹಣ ಕೊಡಿಸಿ ಕಳುಹಿಸಿಬಿಟ್ಟ.

ಹೀಗೇ ಇರಲು ಒಂದು ದಿನ ರಾಜನು ಮಂದಮತಿಯನ್ನು ಕರೆದು "ನೀನು ತುಂಬಾ ಶಕ್ತಿವಂತನಂತೆ ತೋರುವೆ. ನನಗೆ ಸಾಗರ ರಾಜ ಕುಮಾರಿಯನ್ನು ಮದುವೆಯಾಗಬೇಕೆಂಬ ಅಭಿಲಾಷೆಯಿದೆ. ಆಕೆಯನ್ನು ನನಗೆ ತಂದು ಕೊಡಬೇಕು" ಎಂದ.

ಸಾಗರರಾಜನು ಯಾರೋ, ಆತನ ಮಗಳು ಎಲ್ಲಿರುವಳೋ ಮಂದಮತಿಗೆ ತಿಳಿಯದು. ಯಾವುದೋ ಕಾರಣ ಹೇಳಿ ತಪ್ಪಿಸಿಕೊಳ್ಳಲು ಪ್ರಯತ್ನಿಸಿದ. ರಾಜನಿಗೆ ಕೋಪ ಬಂತು. "ನಾನು ಹೇಳಿದ ಕೆಲಸ ಮಾಡದಿದ್ದರೆ ನಿನ್ನ ತಲೆ ಹಾರಿಸಿಬಿಡುವೆನು" ಎಂದು ಖಡ್ಗವನ್ನು ತೆಗೆದು ಝಳಪಿಸಿದ.



ಮಂದಮತಿ ವ್ಯಾಕುಲನಾಗಿ ತನ್ನ ಗೂನು ಕುದುರೆಯ ಹತ್ತಿರಕ್ಕೆ ಹೋಗಿ ತನಗೊದಗಿದ ಕಷ್ಟ ಹೇಳಿಕೊಂಡ. "ಅದೆಷ್ಟರ ಕೆಲಸ. ನೀನು ಚಿಂತಿಸಬೇಡ. ಸಾಗರರಾಜ ಕುಮಾರಿಗೆ ಬಹುಮಾನವಾಗಿ ಕೊಡಲು ದಿವ್ಯವಾದ ಫಲಹಾರಗಳನ್ನು ಕೇಳಿ ರಾಜನಿಂದ ತೆಗೆದುಕೋ. ಮಿಕ್ಕ ವಿಷಯುಗಳನ್ನು ಆಮೇಲೆ ಹೇಳುವೆನು" ಎಂದಿತು ಆ ಕುದುರೆ.

ಆದೇ ಪ್ರಕಾರ ರಾಜನಿಂದ ದಿವ್ಯವಾದ ಫಲಹಾರಗಳನ್ನು ಕೇಳಿ ತೆಗೆದುಕೊಂಡು ಮಂದಮತಿ ತನ್ನ ಗೂನು ಕುದುರೆಯಮೇಲೆ ಪ್ರಯಾಣ ಹೊರಟ. ಆದು ಆಕಾಶಮಾರ್ಗವಾಗಿ ಮೂರು ಸಮುದ್ರಗಳನ್ನು ದಾಟಿ ಸಾಯಂಕಾಲದ ವೇಳೆಗೆ ನಾಲ್ಕನೇ ಸಮುದ್ರ ತೀರವನ್ನು ಸೇರಿಕೊಂಡಿತು. ಅಲ್ಲಿ ಮಂದಮತಿ ಒಂದು ಡೇರೆ ಹಾಕಿಸಿದ. ಅದರಲ್ಲಿ ರಾಜನು ಕೊಟ್ಟ ಫಲಹಾರಗಳನ್ನು ಅಣಿ ಮಾಡಿಟ್ಟು, ಸಾಗರರಾಜಕುಮಾರಿಗಾಗಿ ಕಾದು ಕುಳಿತಿದ್ದ.

ಸ್ವಲ್ಪ ಹೊತ್ತಿಗೆಲ್ಲಾ ಸಮುದ್ರ ಉಕ್ಕೇರಿತು. ದೊಡ್ಡದೊಡ್ಡ ಅಲೆಗಳು ಆಕಾಶದಷ್ಟು ಎತ್ತರವಾಗಿ ಹಾರಿದವು. ಅವುಗಳ ಮೇಲಿಂದ ಸಾಗರರಾಜಕುಮಾರಿ ಬಂದು ತೀರವನ್ನು ಸೇರಿದಳು. ಗುಡಾರವನ್ನೂ ನೋಡಿದಳು. ಫಲಹಾರಗಳ ಪರಿಮಳ ಆಕೆಯ ಮೂಗಿಗೆ ಸೋಕಿದ ಕೂಡಲೇ ಗುಡಾರದೊಳಗೆ ಪ್ರವೇಶಿಸಿ, ಅವುಗಳನ್ನು ತಿನ್ನಲು ಪ್ರಾರಂಭಿಸಿದಳು. ಅಲ್ಲಿ ಅಣಿಮಾಡಿಟ್ಟಿದ್ದ ತಿಂಡಿ ತಿನಸುಗಳು




ಆಕೆಗೆ ಪ್ರಿಯವಾದುವೇ ಆಗಿದ್ದುವು. ಈ ಪರಿವಿಗೆ ಮರೆಯಲ್ಲಿ ಅಡಗಿ ಕುಳಿತಿದ್ದ ಮಂದಮತಿ ಹಿಂದಿನಿಂದ ಬಂದು ಆಕೆಯನ್ನು ಹಿಡಿದುಕೊಂಡ. ಆಕೆ ತಪ್ಪಿಸಿಕೊಳ್ಳಲು ಹೆಣಗಾಡಿದಳು. ಆದರೆ ಮಂದಮತಿ ಆಕೆಯನ್ನು ತನ್ನ ಕುದುರೆಯ ಮೇಲೆ ಹತ್ತಿಸಿಕೊಂಡು ಆಕಾಶಮಾರ್ಗ ಹಿಡಿದ.

ಸಾಗರರಾಜಕುಮಾರಿಯನ್ನು ಕಂಡು ರಾಜನು ಆನಂದಭರಿತನಾಗಿ ತನ್ನನ್ನು ಮದುವೆಯಾಗುವಂತೆ ಆಕೆಯನ್ನು ಕೇಳಿದ.

"ಓ, ಅಗತ್ಯವಾಗಿ ಆಗುವೆನು. ಆದರೆ ನನ್ನದೊಂದು ನೇಮವಿದೆ. ಮೊದಲು ನನ್ನನ್ನು ಇಲ್ಲಿಗೆ ತಂದ ಹುಡುಗ ಕುದಿಯುವ ಹಾಲಿನಲ್ಲಿ ಸ್ನಾನ ಮಾಡಬೇಕು" ಎಂದಳು ಆ




ರಾಜಕುಮಾರಿ. 'ಹಾಗೆಯೇ ಮಾಡಿಸುವೆನು' ಎಂದ ರಾಜ. ಮಂದಮತಿಯನ್ನು ಕರೆಯಿಸಿ, ಕುದಿಯುವ ಹಾಲಿನಲ್ಲಿ ಸ್ನಾನ ಮಾಡುವಂತೆ ಆಜ್ಞೆಮಾಡಿದ. ಹಾಗೆ ಮಾಡದಿದ್ದರೆ ತಲೆ ಕಡಿಸುವೆನೆಂದು ಹದರಿಕೆ ಹಾಕಿದ.

ಮಂದಮತಿ ಖಿನ್ನನಾದ. ಗೂನು ಕುದುರೆಯ ಬಳಿಗೆ ಹೋಗಿ ತನ್ನ ಗೋಳು ಹೇಳಿಕೊಂಡ. "ನೀನೇನು ಭಯಪಡಬೇಡ. ಸರಿ ಎಂದು ಒಪ್ಪಿಕೋ, ಮಿಕ್ಕ ವಿಷಯ ನಾನು ನೋಡಿಕೊಳ್ಳುತ್ತೇನೆ" ಎಂದು ಧೈರ್ಯ ಹೇಳಿತು ಕುದುರೆ.

ಮಂದಮತಿ ಕುದಿಯುವ ಹಾಲಿನಲ್ಲಿ ಸ್ನಾನ ಮಾಡಲು ತಕ್ಕ ಸಿದ್ಧತೆಗಳಾದವು. ದೊಡ್ಡ ಗಂಗಾಳದಲ್ಲಿ ಹಾಲು ಸುರಿದು, ಗಂಗಾಳದ ಕೆಳಗೆ ಸೌದೆ ಇಟ್ಟು ಉರಿಸಿ ಹಾಲು ಕತಕತ ಕುದಿಯುವ ಹಾಗೆ ಮಾಡಿದರು. ಆದರಲ್ಲಿ ಇಳಿಯಲು ಮಂದಮತಿಯನ್ನು ಅಲ್ಲಿಗೆ ಕರೆತಂದರು.

ಈ ಸಮಯದಲ್ಲಿ ಗೂನು ಕುದುರೆ ಯಾರಿಗೂ ತಿಳಿಯದಂತೆ ಹಾಲಿನ ಮೇಲೆ ಉಸಿರು ಬಿಡುತ್ತಾ ಇತ್ತು. ಅದರ ಗಾಳಿಗೆ ಕುದಿಯುವ ಹಾಲು ಮಂಜಿನಂತೆ ತಣ್ಣಗಾಗುತ್ತಿತ್ತು.

ಮಂದಮತಿ ಹಾಲಿನಲ್ಲಿ ಬೆರಳಿಟ್ಟು "ಅರೆ ಏನಿದು, ಎಷ್ಟು ತಣ್ಣಗಿದೆ!" ಎಂದ.

ರಾಜಭಟರು ಗಂಗಾಳದ ಕೆಳಗೆ ಇನ್ನಷ್ಟು ಸೌದೆ ಹಾಕಿ ಉರಿಸಿದರು. ರಾಜನು ನೋಡುತ್ತಿರುವಂತೆಯೇ ಮಂದಮತಿ ಗಂಗಾಳದಲ್ಲಿ ಇಳಿದು ಸಳಸಳನೆಂದು ಕುದಿಯುವ ಹಾಲಿನಲ್ಲಿ ಜಲಕವಾಡಿದ.

"ನಿನ್ನ ನೇಮ ತೀರಿತು. ಇನ್ನು ನನ್ನನ್ನು ಮದುವೆಯಾಗ ಬಹುದಲ್ಲಾ" ಎಂದು ಸಾಗರ ರಾಜಕುಮಾರಿಯನ್ನು ರಾಜನು ಕೇಳಿದ.

"ಅಗತ್ಯವಾಗಿ. ಆದರೆ ನನಗೆ ವಿವಾಹದ ಉಡುಪು ಬೇಕು. ಅವು ಇದ್ದ ಹೊರತು ಸಾಧ್ಯವಿಲ್ಲ" ಎಂದಳಾಕೆ. "ದರ್ಜಿಯವರನ್ನು ಕರೆಯಿಸುವೆನು. ಕೇಳಿದ ಬಟ್ಟೆ ಹೊಲಿಸಿ ಕೊಡುವೆನು" ಎಂದ ರಾಜ.

"ಹಾಗಲ್ಲ. ನನ್ನ ಮದುವೆಯ ಪೋಷಾಕು ನಮ್ಮ ಅಣ್ಣನ ಹತ್ತಿರವಿದೆ. ನಮ್ಮ ಅಣ್ಣ ಚಂದ್ರಲೋಕದಲ್ಲಿದ್ದಾನೆ" ಎಂದಳು ಸಾಗರ ರಾಜಕುಮಾರಿ.

ಮತ್ತೆ ಮಂದಮತಿಗೆ ಕೆಲಸಬಿತ್ತು. ಚಂದ್ರ ಲೋಕಕ್ಕೆ ಹೋಗಿ ರಾಜಕುಮಾರಿಯ ಉಡುಪುಗಳನ್ನು ತರದೇ ಇದ್ದರೆ ತಲೆತೆಗೆ ಯುವೆನೆಂದು ಹೆದರಿಸಿದ ರಾಜ. ಮಂದಮತಿ ತನ್ನ ಕುದುರೆಯನ್ನು ಹತ್ತಿ, ಗಗನ ಮಾರ್ಗ ವಾಗಿ ಅನೇಕ ದಿನ ಪ್ರಯಾಣ ಮಾಡಿದ. ಕೊನೆಗೆ ಚಂದ್ರಮಂಡಲ ಸೇರಿದ. ಸಾಗರ ರಾಜಕುಮಾರಿಯ ಅಣ್ಣನನ್ನು ಕಂಡು, ಅತ ನಿಂದ ಆಕೆಯ ಬಟ್ಟೆಗಳನ್ನು ತಂದನು.

"ಸರಿ ಈಗ ಮದುವೆಯಾಗಲು ನನ್ನ ಅಡ್ಡಿ ಏನಿಲ್ಲ. ಆದರೆ ನಮ್ಮ ಕುಲಾಚಾರದ ಪ್ರಕಾರ ವರನು ಬಿಸಿಬಿಸಿ ಹಾಲಿನಲ್ಲಿ ಸ್ನಾನ ಮಾಡಿ ಬರಬೇಕು" ಎಂದಳು ಸಾಗರ ರಾಜ ರಾಜಕುಮಾರಿ ರಾಜನೊಂದಿಗೆ.

"ನಾನೇ?" ರಾಜ ನಿರ್ಘಾಂತನಾದ.

"ಮಂದಮತಿ ಮಾಡಿದ ಕಾರ್ಯ ನೀವು ಮಾಡಲಾರಿರಾ?" ಪರಿಹಾಸಮಾಡಿದಳು ಸಾಗರರಾಜಕುಮಾರಿ. ರಾಜನಿಗೆ ರೋಷ ಬಂತು. ಕೂಡಲೇ ಗಂಗಾಳದಲ್ಲಿ ಹಾಲು ಕಾಯಿಸುವಂತೆ ಹೇಳಿದ. ಹಾಲು ಕುದಿಯು ತ್ತಿರುವಾಗ ರಾಜಅದರಲ್ಲಿ ಬೆರಳಿಟ್ಟು, ಸರ್ರನೆ ಹಿಂದಕ್ಕೆಳೆದುಕೊಂಡು 'ಅಯ್ಯೋ, ಅಪ್ಪಾ' ಎಂದು ಪೇಚಾಡಲು ಪ್ರಾರಂಭಿಸಿದ. ಆಗ ರಾಜಕುಮಾರಿ "ಮಂದಮತಿ ನಿಮ್ಮಹಾಗೆ ಪೇಚಾಡಿದನೇ? ಇನ್ನೂ ಬೆಂಕಿ ಹಾಕಿ ಎಂದ. ನಗುತ್ತಾ ಹಾಲಿನಲ್ಲಿ ಇಳಿದ" ಎಂದಳು. ರಾಜನಿಗೆ ಪೌರುಷ ಹೆಚ್ಚಾಯಿತು. ಏಣಿ ತರಿಸಿ ಕುದಿಯುತಿದ್ದ ಹಾಲಿನ ಗಂಗಾಳದಲ್ಲಿ ಧುಮಿಕಿದ. ರಾಜನ ಕತೆ ಮುಗಿಯಿತು.

ಆಗ ಸಾಗರರಾಜಕುಮಾರಿ ಮಂದಮತಿ ಯನ್ನು ಮದುವೆಯಾಗುವೆನೆಂದಳು. ಅದೇ ಮುಹೂರ್ತಕ್ಕೆ ಮಂದಮತಿಯನ್ನು ಮದು ಮಗನನ್ನಾಗಿ ಮಾಡಿದರು. ಆತನಿಗೂ ಸಾಗರ ರಾಜಕುಮಾರಿಗೂ ವಿವಾಹವಾಯಿತು.

ಆ ದೇಶಕ್ಕೆ ಮಂದಮತಿ ರಾಜನಾದನು. ಆತನ ಆಳ್ವಿಕೆ ಪ್ರಜೆಗಳಿಗೆ ಹಿಡಿಸಿತು. ಪ್ರಜೆ ಗಳು ತಮ್ಮ ರಾಜನನ್ನು ಎಂದೂ ಮಂದಮತಿ ಎಂದು ಕರೆದುದಿಲ್ಲ.



## ಕು ಕ್ಕು ಕೂ



ಕ್ಕು ಕ್ಕು ಕೂ ಕು ಕ್ಕು ಕೂ
ಕೂಗೋ ಕುಕ್ಕುಟ,
ನಿನ್ನಯ ಜೀವನವುಂಟು
ಬಲು ಚೊಕ್ಕಟ!
ಬೆಳಗಿನಲ್ಲೆದ್ದು ಕೂಗುವುದು ಪರಿಪಾಠ
ಬಡಬಗ್ಗರಿಗೆ ನಿಂದು ನಸುಕಿನಲೆ ಘಂಟಾ
ಕಸಕೆಸೆದ ಕಾಳುಗಳನಾರಿಸುವಿ ಕುಟಿಕುಟಿ
ನಿನ್ನ ಅನ್ನವ ನೀನೇ ಹುಡುಕುವ ಹಟ
ಅದು ನಿನಗೆ ಒಳ್ಳೆ ಪಂಚಾಮೃತದ ಊಟ
ಕಂಡದ್ದು ತಿಂದು ನೀ ಚೆಂಡಿನೊಲು ಮಾಟ
ಮನುಜರನು ಕಾಡುವಾ ಹುಳುಗಳಾಕಾಟ
ಅದಕೆ ಯಮನಾಗುವುದು ನಿಮ್ಮ ಕೂಟ
ಹರುಷದಿಂದಾಡುತ್ತಿ ಪುಟಿಪುಟಿದು ಆಟ
ಸರತಿಯಲಿ ಮೊಟ್ಟೆಗಳ ನಿಡುವೆ ಹತ್ತೆಂಟ
ಬಡಜನಕೆ ನಿನ್ನ ಬೆಳವಣಿಕೆ ಬಲು ಇಷ್ಟ
ಬಾಲಕರು ಬಯಸುವರು ನಿನ್ನ ಒಡನಾಟ
ಹುಂಜ–ಹುಂಜದ ಪಂಥ ವೀರ ಕಾದಾಟ
ಮಾಂಸ ತಿಂಬವರಿಂದ ನಿನಗುಂಟು ಕಾಟ
ಸಾಧು ಕೋಳಿಯೆ ನಿನ್ನ ಕೊಲುವರಕಟ!

—ಭೂಪಾಲ, ವಸವಾಡೆ

## ಕೋಳಿ



ಕೋಕೋ ಕೋಳಿ, ಕೂಗಿತು ಕೋಳಿ
ಬೀಸಿತು ಮೂಡಣ ತಂಪಿನ ಗಾಳಿ
ಕತ್ತಲೆ ಕಾಳಿ ಹೋದಳು ಏಳಿ
ಅಲಸದೆ ಅಂಜದೆ ಧೈರ್ಯವ ತಾಳಿ
ಮೂಡಣ ದಿಕ್ಕು ಸೂರ್ಯನಿಗಕ್ಕು
ಬಗೆಬಗೆ ಬಣ್ಣ ಆಯಿತು ದಿಕ್ಕು
ಎದ್ದನು ಸೂರ್ಯ, ಮಾಡಿದ ಕಾರ್ಯ
ಇರುಳಿನ ಶೌರ್ಯವ ಗೆದ್ದನು ಸೂರ್ಯ
ಏರಿದ ಏರಿದ ಗಗನದ ಮೇಲೆ
ಪ್ರಭೆಯನು ಬೀರಿದ ಧರಣಿಯ ಮೇಲೆ
ಏರುತ ಏರುತ ನಡುನೆತ್ತಿ
ನೋಡಲು ಕೂಡದು ಕಣ್ಣೆತ್ತಿ
ಏತಕೆ ಸೂರ್ಯನೆ ದಣಿಸುತ್ತಿ?
ಏತಕೆ ಬಿಸಿಲನು ಬೀರುತ್ತಿ?
ಕೋಳಿಯು ಕೂಗಿತು ಸೂರ್ಯಗೆ ಕೇಳಿತು
ಬಿಸಿಲನು ತಳೆದ ಕಡಲಿಗೆ ಇಳಿದ
ಶಾಂತಿಯ ತಳೆದ ಇರುಳನು ಕಳೆದ
ಕೊಕ್ಕೋ ಕೋಳಿ ಕೂಗಿತು ಕೋಳಿ
ಮತ್ತೂ ಬೆಳಗ ಆಯಿತು ಏಳಿ!

—ನಾರಾಯಣಜೋಷಿ ವಿಠ್ಠಲ್, ಪುತ್ತೂರು




ಮಹಾರಾಣಾ ಪ್ರತಾಪ್ ಆಳುತ್ತಿದ್ದ ಕಾಲವದು. ಅಕ್ಬರ್ ಬಾದಷಹನು ನಮಗೆ ಚಕ್ರವರ್ತಿಯಾಗಿದ್ದ. ಸಾಮಂತರೆಲ್ಲರೂ ಚಕ್ರವರ್ತಿಗೆ ತಲೆಬಾಗಿದ್ದರು. ಪ್ರತಾಪನು ಮಾತ್ರ ಆತನಿಗೆ ತಲೆಬಾಗಿಸಿರಲಿಲ್ಲ. ಅಕ್ಬರನು ಕೆರಳಿದನು. ರಾಣಾನೂ ಹಟತೊಟ್ಟ. ಆತನಿಗೆ ಅನೇಕ ಕಷ್ಟಗಳನ್ನುಂಟು ಮಾಡಿದ. ಆದರೂ ರಾಣಾ ಜಗ್ಗಲಿಲ್ಲ.

ರಾಣಾನನ್ನು ಹೇಗಾದರೂ ಮಾಡಿ ತನ್ನ ಅಧೀನಪಡಿಸಿಕೊಳ್ಳಲೇ ಬೇಕೆಂದು ಅಕ್ಬರನು ಪಣತೊಟ್ಟ. ಪ್ರತಾಪನಿಗೆ ಸ್ವಾತಂತ್ರ್ಯಜ್ವಾಲೆ ಮತ್ತಷ್ಟು ಹೆಚ್ಚಾಯಿತು. ಕೊನೆಗೆ ಅಕ್ಬರನು ಪ್ರತಾಪನನ್ನು ಅಡವಿಯಪಾಲು ಮಾಡಿದ.

ತನ್ನೊಬ್ಬನ ಪ್ರಾಣವಾಗಿದ್ದರೆ ರಾಣಾ ಲೆಕ್ಕ ಮಾಡುತ್ತಿರಲಿಲ್ಲ. ತನ್ನೊಂದಿಗೆ ಮಡದಿ, ಮಕ್ಕಳು ಕೂಡ ಕಷ್ಟಪಡಬೇಕಾಯಿತಲ್ಲಾ ಎಂದು ಆತ ಬಹು ಚಿಂತಿಸಿದ. 'ಚಕ್ರವರ್ತಿಯ ಕೈಕೆಳಗೆ ಸೇವಕನಾಗಿರಲೇ, ಇಲ್ಲ ಅಡವಿಯಲ್ಲಿ ಸ್ವತಂತ್ರವಾಗಿರುವುದೇ?' ಈ ಸಮಸ್ಯೆಯಿಂದ ರಾಣಾನ ಮನಸ್ಸು ಉದ್ವಿಗ್ನವಾಯಿತು. ಎರಡನೇ ಮಾರ್ಗವೇ ಉತ್ತಮವೆಂದು ಆತನಿಗೆ ತೋರಿತು. ರಾಣಾ ಪ್ರತಾಪನಿಗೆ ಮಾತ್ರವೇ ಅಲ್ಲ, ಆತನ ಸತಿ ಸುಗುಣಾಂಬ, ಹನ್ನೊಂದು ವರ್ಷದ ಕುವರಿ ಚಂಪಾವತಿ, ನಾಲ್ಕುವರ್ಷದ ಕುಮಾರ ಸುಂದರಸಿಂಗ್—ಎಲ್ಲರಿಗೂ ಈ ಮಾರ್ಗವೇ ಉತ್ತಮವೆಂದು ತೋರಿತು. ಅಂದಿನಿಂದ ರಾಣಾ ಕುಟುಂಬ ಸಮೇತನಾಗಿ ಅಡವಿಯಲ್ಲಿ ಅಜ್ಞಾತವಾಸ ಮಾಡುತ್ತಿದ್ದ.

ಮಕ್ಕಳಿಬ್ಬರೂ ಅಡವಿಯಲ್ಲಿ ಆಡಿಕೊಳ್ಳುವರು. ಚಂಪಾವತಿ ಹೂಮಾಲೆ ಪೋಣಿಸಿ ತಮ್ಮನ ಕೊರಳಿಗೆ ಹಾಕಿ ಆನಂದಿಸುವಳು. ಒಂದು ದಿನ ಸುಂದರಸಿಂಗ್ ಹಸಿವಿನ ಬಾಧೆ ತಾಳಲಾರದೆ ಅಳಲು ಪ್ರಾರಂಭಿಸಿದ. ಆಗ ಚಂಪಾವತಿ "ತಮ್ಮಾ, ಇಷ್ಟು ಮಾತ್ರಕ್ಕೇ ಅಳುವುದೇನಪ್ಪಾ?" ಎಂದು ಸಮಾಧಾನಮಾಡಿ ಮನೆಯೊಳಕ್ಕೆ ಎತ್ತಿಕೊಂಡು ಹೋದಳು. ಇದನ್ನು ನೋಡಿಯೂ ರಾಣಾ ಚಲಿಸಲಿಲ್ಲ!

ಸಿ. ವರದರಾಜಪ್ಪ, ಹುಬ್ಬಳ್ಳಿ




ಮಹಾರಾಣಾ ಪ್ರತಾಪ್, ಆತನ ಮಡದಿ ಸುಗುಣಾಂಬ ಒರಟು ವಸ್ತ್ರಗಳನ್ನು ಧರಿಸಿ ದೀನವದನರಾಗಿ ಕುಳಿತಿದ್ದಾರೆ. ಆಗಾಗ ಪ್ರತಾಪ್ ನಿಟ್ಟುಸಿರನ್ನು ಬಿಡುತ್ತಿದ್ದಾನೆ. "ಸುಗುಣಾ, ನೋಡಿದೆಯಾ ವಿಧಿಯ ಆಟ? ಒಬ್ಬ ಬ್ರಾಹ್ಮನು ಮನೆಗೆ ಅತಿಥಿಯಾಗಿ ಬಂದು ಬರಿ ಹೊಟ್ಟೆಯಲ್ಲಿ ಹಿಂತಿರುಗಬೇಕಾಯಿತು. ಈ ರೀತಿ ನಡೆಯುವುದು ನನ್ನ ಜೀವಮಾನದಲ್ಲಿ ಇದೇ ಮೊದಲು. ರಾಜಾಸ್ಥಾನಕ್ಕೆ ಮುಕುಟ ಪ್ರಾಯವಾಗಿದ್ದ ನಮ್ಮ ಚಿತ್ತೂರು ಪ್ರಭುಗಳಿಗೆಲ್ಲಾ ತಲೆತಗ್ಗಿಸುವಂತಹ ವಿಷಯವಲ್ಲವೇ ಇದು? ಛೆ! ಇನ್ನು ನಾನು ಉಳಿದರೆಷ್ಟು, ಅಳಿದರೆಷ್ಟು" ಎಂದು ಪರಿತಾಪಪಟ್ಟು ಮೂರ್ಛೆಹೋದ.

ಗಂಡನಿಗೆ ಅನೇಕ ಉಪಚಾರದ ಮಾತುಗಳು ಹೇಳಿದಳು ಸುಗುಣ.

"ತಿಂಗಳುಗಟ್ಟಳೆ ಉಪವಾಸವಿದ್ದರೂ ನನಗೆ ಬಾಧೆಯುಂಟಾಗಲಿಲ್ಲ. ನಮ್ಮ ಅಕ್ಷಯನು ಕ್ಷುದ್ಬಾಧೆಯಿಂದ ಸತ್ತರೂ ನಾನು ಲೆಕ್ಕಮಾಡಲಿಲ್ಲ. 'ಅನ್ನ', 'ಅನ್ನ' ಎಂದು ವಿಲಪಿಸುತ್ತಾ ನಮ್ಮ ಸ್ವರ್ಣ ನಮ್ಮ ಕೈಬಿಟ್ಟಾಗಲೂ ನಾನು ಧೈರ್ಯಗುಂದಲಿಲ್ಲ. ಆದರೆ... ಇಂದು... ಒಬ್ಬ ಬ್ರಾಹ್ಮಣ ನಮ್ಮ ಕುಟೀರಕ್ಕೆ ಬಂದು ಹಸಿವಿನ ಬಾಧೆಯಿಂದ ಹಿಂತಿರುಗುವ ಸ್ಥಿತಿ ಕಂಡರೆ... ಎಂತಹ ಅವಮಾನ... ಛೆ. ಧಿಕ್ಕಾರ ಈ ನನ್ನ ಜನ್ಮಕ್ಕೆ' ಎಂದು ಮತ್ತೊಂದುಸಾರಿ ಸ್ಮೃತಿತಪ್ಪಿ ಬಿದ್ದುಹೋದ ರಾಣಾಪ್ರತಾಪ್.

* * *

ಅಷ್ಟರಲ್ಲಿ ಚಂಪಾವತಿ ತಮ್ಮನನ್ನು ಎತ್ತಿಕೊಂಡು ತಂದೆಯ ಹತ್ತಿರ ಬಂದಳು. 'ಹೆದರಬೇಡಿ, ಅಪ್ಪಾಜಿ. ನೀವು ನೆನೆಸಿದಂತೆ ಬ್ರಾಹ್ಮಣನು ಬರಿಹೊಟ್ಟೆಯಲ್ಲಿ ಹೋಗಿಲ್ಲ. ಸ್ನಾನಮಾಡಿಕೊಂಡು ಬರಲು ಹೋಗಿದ್ದಾನೆ. ಆತನಿಗೆ ಊಟವಿಟ್ಟು ಕಳುಹಿಸುವ ಬಾಧ್ಯತೆ ನನ್ನದು" ಎಂದು ಭರವಸೆ ನೀಡಿದಳು.

ಆಶ್ಚರ್ಯಹೊಂದಿದ ರಾಣಾ. ಚಂಪಾವತಿಯನ್ನು ಬರಸೆಳೆದು ಅಪ್ಪಿಕೊಂಡ. "ನನ್ನ ಕೀರ್ತಿಯನ್ನು ಉಳಿಸಿದೆ, ತಾಯಿ. ಸರಿ, ಬ್ರಾಹ್ಮಣನನ್ನು ಹೇಗೆ ತೃಪ್ತಿಪಡಿಸುವೆ?" ಎಂದ. "ಅಪ್ಪಾಜಿ, ಎರಡು ದಿನಗಳಿಂದ ನನ್ನ

ಪಾಲಿನ ರೊಟ್ಟಿ ಹಾಗೇ ಉಳಿದಿದೆ. ಅದನ್ನು ಆತನಿಗೆ ಬಡಿಸುವೆನು. ಆತನು ಬರುವಷ್ಟರಲ್ಲಿ ನಮಗಾಗಿ ಅಡವಿಯಲ್ಲಿ ಸಿಕ್ಕಿದ ಸೊಪ್ಪು ತಂದು ಭಕ್ಷ್ಯಮಾಡಿರುವೆನು" ಎಂದಳು.

ರಾಣಾ ಪ್ರತಾಪನ ಕಣ್ಣುಗಳಿಂದ ಅಪ್ರಯತ್ನವಾಗಿ ನೀರು ಮಿಡಿಯಿತು.

*   *   *

ಸ್ನಾನ ಮಾಡಿಕೊಂಡು ಬಂದ ಬ್ರಾಹ್ಮಣ. ಕುಳಿತುಕೊಳ್ಳಲು ಸಣ್ಣ ಚಾಪೆ ಹಾಸಿದಳು ಚಂಪಾವತಿ. ಆತನು ಕುಳಿತುಕೊಂಡ ಕೂಡಲೇ, ಮಣೆ ಹಾಕಿ ತಟ್ಟೆಯನ್ನಿಟ್ಟು ರೊಟ್ಟಿ ಬಡಿಸಿದಳು. ಚಟ್ನಿ ಹಾಕಿದಳು. ಆ ಬ್ರಾಹ್ಮಣ ಸಂಪ್ರೀತಿಯಿಂದ ತಿನ್ನತೊಡಗಿದ. "ಸ್ವಾಮಿ, ಅಡವಿಯಲ್ಲಿ ವಾಸಿಸುವವರು ನಾವು. ಇದಕ್ಕಿಂತಲೂ ಹೆಚ್ಚು ಮಾಡಿಸಲು ಸಾಧ್ಯವಾಗದಾಯಿತು, ಕ್ಷಮಿಸಬೇಕು" ಎಂದಳು ಚಂಪಾವತಿ ಬಹು ವಿನಯದಿಂದ.

"ತಾಯೀ, ಹಾಗೆ ತಿಳಿಯಬೇಡ. ಇಷ್ಟು ತೃಪ್ತಿಕರವಾದ ಊಟವನ್ನು ನನ್ನ ಜೀವಮಾನದಲ್ಲೇ ತಿನ್ನಲಿಲ್ಲವೆಂದರೆ ನಂಬು. ಸುಖವಾಗಿ ಬಹುಕಾಲ ಬಾಳು ತಾಯಿ" ಎಂದು ಆಶೀರ್ವಾದ ಮಾಡಿ ಹೊರಟುಹೋದ ಆ ಬ್ರಾಹ್ಮಣ.

ಈ ವಿಷಯ ತಂದೆಗೆ ತಿಳಿಸಲು ಓಡಿದಳು ಚಂಪಾವತಿ. ಆದರೆ ಬಲಹೀನತೆ ಯಿಂದ ನಡುದಾರಿಯಲ್ಲೇ ಕುಸಿದು ಬಿದ್ದಳು. ಬಾಯಿಂದ ಮಾತೇ ಹೊರಡದಾಯಿತು.



ರಾಣಾ ಬಂದು ನೋಡಿದ. ಸುಗುಣ ಪಕ್ಕದಲ್ಲಿ ಕುಳಿತಿದ್ದಾಳೆ. ತಳಮಳಪಟ್ಟ ಪ್ರತಾಪ್. ಆತನ ಮನಸ್ಸು ಅಧೀರವಾಗ ತೊಡಗಿತು. "ಸುಗುಣಾ, ದಯಾಶೀಲ ಬಾದಷಹನು ಒಪ್ಪಂದಕ್ಕೆ ಬರುವಂತೆ ಹೇಳಿ ಕಳುಹಿಸಿದ್ದಾನೆ" ಎಂದ.

ಅಷ್ಟರಲ್ಲಿ ಹೊರಗೆ ಹೆಜ್ಜೆಯ ಸಪ್ಪಳ ವಾಯಿತು. 'ಬಾದಷಹನ ಮನುಷ್ಯರೇ ಇರಬೇಕು' ಎಂದ ರಾಣ ನವಚೇತನದಿಂದ.

ಕಂಪಿಸುತ್ತಿರುವ ತುಟಿಗಳಿಂದ, ನಡುಗುತ್ತಿರುವ ಶರೀರದಿಂದ ಚಂಪಾವತಿ ಗಬಕ್ಕನೆ ಹಾಸಿಗೆಯಿಂದ ಏಳಲು ಪ್ರಯತ್ನಿಸಿದಳು. ಆದರೆ ಬಲಹೀನತೆಯಿಂದ ಹಾಗೆ ಏಳಲಾರದೆ ಬಿದ್ದುಹೋದಳು. "ಅಪ್ಪಾಜಿ, ಬಾದಷಹನ

ದಯೆ ಇಂದಿಗೆ ತಿಳಿಯಿತೆ ನಿಮಗೆ? ನಾಳೆ ತನ್ನ ಆಸ್ಥಾನದಲ್ಲಿ ಉನ್ನತ ಪದವಿಯನ್ನು ಕೊಡುತ್ತಾನೆ. ನಾಳಿದ್ದು ಮತ್ತೆ ಗುಲಾಮ ನನ್ನಾಗಿ ಮಾಡುತ್ತಾನೆ. ಇದು ನಿಮಗೆ ತೃಪ್ತಿಯೆ? ರಜಪೂತವಂಶದ ಪೌರುಷ ಮಣ್ಣುಪಾಲಾಗ ಬೇಕೆ? ವಂಶಗೌರವನ್ನು ನಾಶ ಮಾಡುವಿರಾ ಅಪ್ಪಾಜಿ? ಹಲ್ದೀಘಾಟ್ ಯುದ್ಧದಲ್ಲಿ ರಾಣಾನ ಮಕ್ಕಳು ಸಿಂಹದ ಮರಿಗಳೆಂದು ನಾವು ಬಾದಷಹನಿಗೆ ತೋರಿಸಿ ಕೊಡಲಿಲ್ಲವೇ? ಇಂದು ಸಂಧಿ ಎಂಬ ಬಲೆ ಯಲ್ಲಿ ರಾಣಾ ಬಿದ್ದನೆಂದರೆ ನಾಚಿಕೆ ಗೇಡಲ್ಲವೇ?" ಎಂದು ಆವೇಶ ಪೂರಿತಳಾಗಿ ನುಡಿದು ಹಾಸಿಗೆಯ ಮೇಲೆ ಸೊರಗಿ ಹೋದಳು.

ಬಿಕ್ಕಿ ಬಿಕ್ಕಿ ಅತ್ತ ರಾಣಾ. "ಅಮ್ಮಾ ಚಂಪಾ, ಅಂತಹ ಹೇಯ ಕಾರ್ಯಕ್ಕೆ ರಾಣಾ ಒಡಂಬಡುವುದಿಲ್ಲ. ನಂಬು ತಾಯಿ. ನಿನ್ನ ಬಾಧೆ ನೋಡಲಾರದೆ ಹಾಗೆ ನುಡಿದೆ. ನಿಶ್ಚಿಂತೆಯಾಗಿರು" ಎಂದ. ಕೂಡಲೇ ಚಂಪಾವತಿ ಸಂಪ್ರೀತಳಾಗಿ, ಶಾಶ್ವತವಾಗಿ ಕಣ್ಣುಮುಚ್ಚಿದಳು.

ಅಷ್ಟರಲ್ಲಿ ಹೊರಗಿನಿಂದ "ನಿಜ. ನಿಜ" ಎಂಬ ಮಾತುಗಳು ಕೇಳಿಸಿದವು. ರಾಣಾ ಹಿಂತಿರುಗಿ ನೋಡಿದ. ತಮ್ಮ ಮನೆಗೆ ಅತಿಥಿ ಯಾಗಿ ಬಂದಿದ್ದ ಬ್ರಾಹ್ಮಣ ಮತ್ತೆ ಬಂದಿ ದ್ದಾನೆ! ರಾಣಾನ ಕೈಯನ್ನು ಹಿಡಿದುಕೊಂಡು ಆ ಬ್ರಾಹ್ಮಣ ಚಂಪಾವತಿಯನ್ನು ನೋಡಿ ಕಂಬನಿ ಸುರಿಸುತ್ತ, "ರಾಣಾ, ಪವಿತ್ರವಾದ ಈ ಪುಷ್ಪವು ಉದುರಿ ಹೋಗಲು ಮಹಾಪಾಪಿ ನಾನೇ ಕಾರಣ! ಇವನೇ ಅಕ್ಬರ್. ಈಕೆಯ ಹೆಸರು ಸುವರ್ಣಾಕ್ಷರಗಳಲ್ಲಿ ಚರಿತ್ರೆಯಲ್ಲಿ ಸೇರಿ ಬಿಟ್ಟಿದೆ. ನಿನಗಾಗಲೀ, ನನಗಾಗಲೀ ಇದಕ್ಕಿಂತಲೂ ಬೇರೇನು ಬೇಕು? ಈ ಚಂಪಾ ವತಿಯ ಸಮಕ್ಷಮದಲ್ಲಿ, ದೇವರ ಸಾಕ್ಷಿಯಾಗಿ ನುಡಿಯುತ್ತಿರುವೆನು–ಇನ್ನುಮುಂದೆ ನಮ್ಮಿಬ್ಬ ರಲ್ಲಿ ಯಾವ ವಿಧವಾದ ಹಗೆತನ ಕೂಡದು" ಎಂದು, ಅಕ್ಬರನು ರಾಣಾನನ್ನು ಪ್ರೀತಿಯಿಂದ ಆಲಿಂಗಿಸಿದ.



# ನಾಲ್ಕು ಕಡೆಯ ಸುದ್ದಿ

ಒಂದು ಗ್ರಾಮದಲ್ಲಿ ಒಂದು ಕೋತಿಯಿತ್ತು. ತುಂಟ ಹುಡುಗನೊಬ್ಬನು ಅದನ್ನು ಅಣಕಿಸುತ್ತಿದ್ದ. ಅದೂ ಅಣಕಿಸಿತು. ತಲೆ ಕೆರೆದುಕೊಂಡ. ಅದೂ ಸಹ ತಲೆ ಕೆರೆದುಕೊಂಡಿತು. ಆಗ ಆ ಹುಡುಗನಿಗೆ ಒಂದು ಯೋಚನೆ ಹೊಳೆಯಿತು "ಎಲಾ, ನಾನು ಮಾಡಿದಂತೆ ಈ ಕೋತಿಯೂ ಮಾಡುತ್ತಿದೆ. ಅದಕ್ಕೆ ಬಾಲವಿದೆ. ನನಗಿಲ್ಲ. ನಾನು ಅದರ ಬಾಲನೆಳೆದರೆ ಅದೇನು ಮಾಡುವುದೋ ನೋಡೋಣ" ಎಂದು ಅದರ ಬಾಲ ಎಳೆದ. ಆ ಕೋತಿ ಕುಪಿತಗೊಂಡು ಅವನ ಮೇಲೆ ಬಿದ್ದು ಕಚ್ಚಿಬಿಟ್ಟಿತು.



ಒಬ್ಬ ವಿಜ್ಞಾನಿ ಅನೇಕ ದೇಶಗಳನ್ನು ಸುತ್ತಿ, ತನ್ನ ಸ್ಥಾನಕ್ಕೆ ಹಿಂತಿರುಗಿದ. ಆತನನ್ನು ಸ್ವಾಗತಿಸಲು ಒಂದು ಭಾರಿ ಸಭೆ ಸೇರಿಸಿದರು ಅಲ್ಲಿನ ಜನ. ಆತನ ಭಾಷಣದ ಧೋರಣೆ "ನಾನು ಕಾಶ್ಮೀರಕ್ಕೆ ಹೋಗಿದ್ದೆ. ನಾನು ತೆಗೆದುಕೊಂಡು ಹೋಗಿದ್ದ ತುಪ್ಪ ಕಲ್ಲಿನಂತೆ ಗಟ್ಟಿಯಾಗಿ ಬಿಟ್ಟಿತು. ಚಮಚದಿಂದ ತೆಗೆಯಹೋದರೆ ಚಮಚವೇ ಮುರಿದು ಹೋಯಿತು. ಚಾಕು ತೆಗೆದುಕೊಂಡೆ. ಆದರೆ ಚಾಕು ಒಗ್ಗಿಹೋಗಬೇಕೆ? ಅಷ್ಟು ಚಳಿದೇಶವದು!—" ಅಷ್ಟರಲ್ಲಿ ಸಭಿಕನೊಬ್ಬನು "ಅಯ್ಯಾ, ನೀವು ಹೇಳುವುದನ್ನು ನೋಡಿದರೆ ನಿಮ್ಮ ಮೆದುಳು ಸಹ ಗೆಡ್ಡೆ ಕಟ್ಟಿರುವುದೆಂದು ತೋರುತ್ತದೆ" ಎಂದ.

'ಸಾಮಾನ್ಯ ಆಂಗ್ಲೇಯ ದೊರೆಯೊಬ್ಬನು ಇಂಡಿಯಾ ದೇಶಕ್ಕೆ ಅಧಿಕಾರಿಯಾಗಿ ಬಂದರೆ ಆತನು ಬಹಳ ಸಮರ್ಥನಾಗುವನು. ಇದು ತುಂಬಾ ಆಶ್ಚರ್ಯಕರವಲ್ಲವೇ' ಎಂದು ಒಬ್ಬ ಆಂಗ್ಲೇಯ ದೊರೆ ಹಿಂದೂ ರಾಜಕಾರಣಿಯೊಬ್ಬನನ್ನು ಕೇಳಿದ.

ಅದಕ್ಕೆ ಆ ರಾಜಕಾರಣಿ ಹೇಳಿದ: "ಇದಕ್ಕಿಂತಲೂ ಆಶ್ಚರ್ಯಕರವಾದ ವಿಷಯವಿದೆ. ನಮ್ಮ ದೇಶದಲ್ಲಿ ಕೆಲಸಕ್ಕೆ ಬಾರದ ಕಲ್ಲನ್ನು ವಿಗ್ರಹವಾಗಿ ಕೆತ್ತಿದ ಕೂಡಲೇ ಅದಕ್ಕೆ ತುಂಬಾ ಪೂಜ್ಯತೆ ಬಂದುಬಿಡುತ್ತದೆ!"



ಒಬ್ಬ ಮಹಾರಾಜನಿಗೆ 38 ಜನ ಸಾಮಂತರಿದ್ದರು. ಆ ಮಹಾರಾಜನು ಸುಖವಾಗಿಯೇ ಇದ್ದ. ಆದರೆ ಈ ಸಾಮಂತರು ಏನು ಮಾಡಿಬಿಡುವರೋ ಎಂಬ ಹೆದರಿಕೆ ಆಗಾಗ ಬರುತ್ತಿತ್ತು. ಒಂದುಸಾರಿ ಆತನ ಹತ್ತಿರಕ್ಕೆ ಒಬ್ಬ ಯೋಗೀಶ್ವರನು ಬರಲು, ಆತನಿಗೆ ತನ್ನ ಭಯವನ್ನು ತಿಳಿಸಿದ. ಆಗ ಆ ಯೋಗೀಶ್ವರನು "ಎಲೈ ರಾಜನೇ, ಭಯವೇಕೆ? 32 ಹಲ್ಲುಗಳ ಮಧ್ಯೆ ಇರುವ ನಾಲಿಗೆ ಹೇಗೆ ನಡೆಯುತ್ತಿದೆ. ಅದೇ ರೀತಿ ನೀನು ಬುದ್ಧಿವಂತಿಕೆಯಿಂದ ನಡೆದುಕೊಳ್ಳಬೇಕು" ಎಂದ.



# ವರ್ತಕನ ಮಗ

ಗಾಂಧಾರದೇಶದಲ್ಲಿ ಕುಬೇರಗುಪ್ತನೆಂಬ ಭಾರಿ ವರ್ತಕನಿದ್ದ. ಆತನು ಸಮುದ್ರ ವ್ಯಾಪಾರದಲ್ಲಿ ಕೋಟ್ಯಾಂತರ ಹಣ ಸಂಪಾದಿಸಿದ.

ಗುಪ್ತನಿಗೆ ಒಬ್ಬನೇ ಮಗ. ಅವನ ಹೆಸರು ಕೀರ್ತಿಸಾಗರ. ಹುಡುಗ ರೂಪಲಾವಣ್ಯಗಳಿಗೆ ಮಾತ್ರವಲ್ಲದೆ, ಧೈರ್ಯ ಸಾಹಸ, ಬುದ್ಧಿಚಾತುರ್ಯಗಳಿಗೂ ಪ್ರಸಿದ್ಧನಾದ. ಮೇಲಾಗಿ ಕರುಣಾಳು. ಕೀರ್ತಿಸಾಗರನು ಬೆಳೆದು ದೊಡ್ಡವನಾಗುವಲ್ಲಿಗೆ ಗುಪ್ತನಿಗೆ ವಾರ್ಧಿಕ್ಯ ಬಂತು. ಆ ಕಾರಣ ಗುಪ್ತನು ಮಗನನ್ನು ಕರೆದು ವಹಿವಾಟನ್ನೆಲ್ಲಾ ಮಗನಿಗೆ ಒಪ್ಪಿಸಿದ.

ಒಂದು ದಿನ ಕೀರ್ತಿಸಾಗರನು ಸಮುದ್ರ ವ್ಯಾಪಾರಕ್ಕೆ ಹೋಗಿಬರಲು ಎಲ್ಲ ಸಿದ್ಧತೆಗಳನ್ನು ಮಾಡಿಕೊಂಡ. ಬಗೆಬಗೆಯ ಸರಕುಗಳನ್ನು ಹಡಗುಗಳಲ್ಲಿ ತುಂಬಲಾಯಿತು. ಬೇಕಾದಷ್ಟು ಪರಿವಾರ ಅವನನ್ನು ಹಿಂಬಾಲಿಸಿತು.

ಹೀಗೇ ಪ್ರಯಾಣ ಮಾಡುತ್ತಿರಲು ಅವರಿಗೆ ಒಂದು ರೇವು ಸಿಕ್ಕಿತು. ಹಡಗುಗಳನ್ನು ಆ ರೇವಿನಲ್ಲಿ ನಿಲ್ಲಿಸಿ, ವಿಶಾಲವಾದ ಮೈದಾನದಲ್ಲಿ ಡೇರಾಗಳನ್ನು ಸಿದ್ಧಗೊಳಿಸಿದರು. ಪರಿವಾರವೆಲ್ಲಾ ಆಯಾಸಗೊಂಡಿದ್ದರಿಂದ ಆ ಡೇರಾಗಳಲ್ಲಿ ನಿದ್ದೆ ಮಾಡಿದರು. ಆದರೆ ಕೀರ್ತಿಸಾಗರನಿಗೆ ಮಾತ್ರ ನಿದ್ದೆ ಬರಲಿಲ್ಲ. ಹಾಗೇ ಆಲೋಚಿಸುತ್ತಾ ಮಲಗಿರಲು ಕೀರ್ತಿಸಾಗರನಿಗೆ ಒಂದು ವಿಚಿತ್ರವಾದ ಆರ್ತನಾದ ಕೇಳಿಸಿತು.

ಅದನ್ನು ತಿಳಿಯಲು ಕೌತುಕದಿಂದ ಕೀರ್ತಿಸಾಗರನು ಧ್ವನಿ ಕೇಳಿಸಿದ ದಿಕ್ಕಿನಲ್ಲಿ ನಡೆದ. ಅದೊಂದು ಅಡವಿ. ಅಲ್ಲಿ ನಡೆಯುತ್ತಿದ್ದ ದೃಶ್ಯವನ್ನು ಕಂಡು ಅವನ ಹೃದಯ ಕರಗಿ ನೀರಾಯಿತು. ಕೆಲವಾರು ವರ್ತಕರು ಕೆಲವರನ್ನು ಚಾಟಿಗಳಿಂದ ಹೊಡೆಯುತ್ತಿದ್ದಾರೆ. ಆ ಜನರು ಬೇರೇನೂ ಮಾಡಲಾರದೆ ಗೋಳೋ ಎಂದು ಅಳುತ್ತಿದ್ದಾರೆ. ಕೀರ್ತಿಸಾಗರನು ಅವರಲ್ಲಿಗೆ ಹೋಗಿ

ಜಿ. ವೆಂಕಟಲಕ್ಷ್ಮಿ, ಬೊಂಬಾಯಿ



"ಅವರನ್ನು ಹೊಡೆಯಬೇಡಿ. ನಿಲ್ಲಿಸಿರಿ. ಅವರೇನು ತಪ್ಪು ಮಾಡಿದ್ದಾರೆ?" ಎಂದು ಗದರಿಸಿದ. ಅದಕ್ಕೆ ಅವರು "ತಪ್ಪುಗಿಪ್ಪು ಏನಿಲ್ಲ. ಅಲ್ಲ, ನಿನಗೇಕೆ ನಮ್ಮ ಗೊಡವೆ? ಹೋಗು, ಹೋಗು. ಅವರು ಗುಲಾಮರು. ಹಣ ಸುರಿದು ಕೊಂಡಿದ್ದೇವೆ. ಇಂತವರ ವ್ಯಾಪಾರಮಾಡುವುದೇ ನಮ್ಮ ಕಸಬು. ನಾವು ಹೇಳಿದಂತೆ ನಡೆಯದಿದ್ದರೆ ಹೊಡೆಯುತ್ತೇವೆ ಅಷ್ಟೇ" ಎಂದರು ಆ ವರ್ತಕರು ನಿರ್ಲಕ್ಷ್ಯವಾಗಿ.

ಆಗ ಕೀರ್ತಿಸಾಗರನು "ಓ, ಹಾಗೋ. ನೀವು ಗುಲಾಮರ ವ್ಯಾಪಾರಿಗಳೋ! ಸೊಗಸಾಗಿದೆ. ನಾನು ಇವರನ್ನೆಲ್ಲಾ ಕೊಂಡುಕೊಳ್ಳುತ್ತೇನೆ. ಬೆಲೆ ಹೇಳಿ. ನಿಮಗೆಷ್ಟು ಲಾಭ ಬೇಕೋ ಹೇಳಿ" ಎಂದ. ಅವರು ಬೆಲೆ ಹೇಳಿದರು.

ಆ ವರ್ತಕರು ಬಯಸಿದಷ್ಟು ಹಣ ತೆತ್ತು ಗುಲಾಮರನ್ನೆಲ್ಲಾ ಬಂಧ ವಿಮುಕ್ತರನ್ನಾಗಿ ಮಾಡಿ, ವರ್ತಕರನ್ನು ಮುಂದಕ್ಕೆ ಸಾಗು ಹಾಕಿದ ಸಾಗರ. ಪ್ರತಿಯೊಬ್ಬನ ಹೆಸರು, ಊರು ತಿಳಿದುಕೊಂಡು ಅವರವರ ಸ್ಥಳಕ್ಕೆ ಕಳುಹಿಸಿದ. ಅವರೆಲ್ಲಾ ಸಂತೋಷದಿಂದ ಕೀರ್ತಿಸಾಗರನನ್ನು ಕೊಂಡಾಡಿದರು.

ಬಿಡುಗಡೆ ಹೊಂದಿದ ಗುಲಾಮರೆಲ್ಲಾ ಅವರವರ ಮನೆಗೆ ಹೋಗಿ ಸೇರಿಕೊಂಡರು. ಕಟ್ಟಕಡೆಯಲ್ಲಿ ಒಬ್ಬ ಸುಂದರಿ ಮತ್ತು ಒಬ್ಬ ಮುದುಕಿ ಮಾತ್ರ ಉಳಿದರು. ಕುಶಲಪ್ರಶ್ನೆಗಳಿಗೆ ಆ ಸುಂದರಾಂಗಿ ಹೀಗೆ ಜವಾಬು ಕೊಟ್ಟಳು: "ನಾನು ಉತ್ಕಲ ದೇಶದ ರಾಜಪುತ್ರಿ. ಈಕೆ ನನ್ನ ದಾದಿ. ನಾವು ದೇವಾಲಯದಲ್ಲಿರುವಾಗ ಆ ವರ್ತಕರು ನಮ್ಮನ್ನು ಹಿಡಿದು ತಂದರು"

ಅಲ್ಲಿಂದ ಉತ್ಕಲ ದೇಶ ತುಂಬಾ ದೂರ. ಆದುದರಿಂದ ಸಾಗರನೊಂದಿಗೆ ಗಾಂಧಾರ ದೇಶಕ್ಕೆ ಹೋಗಲು ಅವರಿಬ್ಬರೂ ಸಮ್ಮತಿಸಿದರು. ಅವರನ್ನು ಹಿಂದಿಟ್ಟುಕೊಂಡು ತನ್ನ ದೇಶದಕಡೆ ಪ್ರಯಾಣ ಮಾಡಿದ.

ಮನೆ ತಲುಪಿದಾಗ ಕುಬೇರಗುಪ್ತನು ಆತುರದಿಂದ ಮಗನನ್ನು ಎದುರುಗೊಳ್ಳಲು ಬಂದ. ಅಪಾರ ಹಣ ತಂದಿರಬೇಕೆಂದು ಆಶೆಗೊಂಡಿದ್ದ ಗುಪ್ತ. ಆದರೆ ಸಾಗರನು ಆತನಿಗೆ



ಸುಂದರಿಯನ್ನೂ ಆಕೆಯ ದಾದಿಯನ್ನೂ ತೋರಿಸಲು ಆತನ ಮೈ ಕೆಂಡವಾಯಿತು. ಸಾಗರನು ತನ್ನ ಪರೋಪಕಾರ ವಿವರಿಸಿದ್ದು ಆತನಿಗೆ ಹಿತವಾಗಿ ಕಾಣಿಸಲಿಲ್ಲ. "ಕೈಲಾಗದ ಪೆದ್ದೇ, ಬಹಳ ಒಳ್ಳೆ ಕೆಲಸ ಮಾಡಿಕೊಂಡು ಬಂದೆ. ನಡಿ ನಡಿ" ಎಂದ ಗುಪ್ತ.

ಆ ಮಾತು ಕೇಳಿದ ಕೂಡಲೇ ರೋಷ ಬಂತು ಸಾಗರನಿಗೆ. ತತ್‌ಕ್ಷಣ ಸುಂದರಿ ಮತ್ತು ಮುದುಕಿಯನ್ನು ಕರೆದುಕೊಂಡು ಮನೆ ಬಿಟ್ಟು ಹೊರಟು ಹೋದ. ಮಗನು ನಿರ್ದೋಷಿ ಎಂದು ಅರಿತು, ಮತ್ತೆ ಹಿಂದಕ್ಕೆ ಕರೆಯಿಸಿಕೊಂಡ ಗುಪ್ತ.

"ಮಗೂ, ಆದದ್ದು ಆಗಿಹೋಯಿತು. ಮತ್ತೊಂದು ಅವಕಾಶ ಕೊಡುವೆನು. ಈಸಾರಿ ನಾನು ಹೇಳಿದಂತೆ ಕೇಳಿ ಧನ ಸಂಪಾದಿಸಿಕೊಂಡು ಬರಬೇಕು" ಎಂದು ಮಗನನ್ನು ತಾನೇ ಸಮುದ್ರದ ರೇವಿಗೆ ಕರೆದುಕೊಂಡು ಹೋದ. ಅಲ್ಲಿ ಸಿದ್ಧವಾಗಿದ್ದ ಹಡಗೊಂದನ್ನು ತೋರಿಸಿದ. ಸಾಗರನಿಗೆ ಆಶ್ಚರ್ಯವಾಯಿತು. ಏನು ಅದು? ಹಡಗಿನ ಮೇಲೆ ಎಲ್ಲರಿಗೂ ಕಾಣುವಂತೆ ಜೀವ ಕಳೆಯಿಂದ ತುಂಬಿರುವ ಉತ್ಕಲ ರಾಜನ ಮಗಳ ಪ್ರತಿಮೆಯನ್ನು ಸಜ್ಜುಗೊಳಿಸಿತ್ತು.

"ಇದೇನು?" ಎಂದು ಸಾಗರನು ಪ್ರಶ್ನೆ ಮಾಡಿದ.

"ಅದರಲ್ಲೇ ಅಡಗಿದೆ ರಹಸ್ಯ. ನನ್ನನ್ನೇನೂ ಈಗ ಕೇಳಬೇಡ. ಮೈಮೇಲೆ ಪ್ರಜ್ಞೆಯಿಟ್ಟುಕೊಂಡು ವ್ಯಾಪಾರಮಾಡಿ ಲಾಭ ಸಂಪಾದಿಸಿಕೊಂಡು ಬಾ. ನೀನು ಹಿಂತಿರುಗಿ ಬರುವ ತನಕ ಇವರಿಬ್ಬರೂ ಇಲ್ಲೇ ಉಳಿದಿರುತ್ತಾರೆ" ಎಂದ ಗುಪ್ತ.

ಕೀರ್ತಿಸಾಗರ ಪ್ರಯಾಣ ಮಾಡಿದ. ಕೆಲ ದಿನಗಳ ನಂತರ ಆ ಹಡಗು ಒಂದು ರೇವನ್ನು ಸೇರಿತು. ಅಲ್ಲಿದ್ದ ರಾಜಭಟರು ಸಾಗರನನ್ನು ಬಂಧಿಸಿ ತಮ್ಮ ರಾಜನಲ್ಲಿಗೆ ಕರೆದೊಯ್ದರು. ಇವರ ವರ್ತನೆಗೆ ಕಾರಣ ತಿಳಿಯದೆ ಕೀರ್ತಿಸಾಗರನು ಚಕಿತನಾಗಿ ರಾಜನನ್ನು ಕುರಿತು "ಮಹಾ ಪ್ರಭುಗಳೇ, ಇದೇನು ಈ ಅನ್ಯಾಯ?" ಎಂದು ಕೇಳಿದ.

ಅದಕ್ಕೆ ರಾಜನು ಉದ್ರೇಕಗೊಂಡು "ದುಷ್ಟನೇ, ನನ್ನ ಮಗಳ ಪ್ರತಿಮೆಯನ್ನು

ಹೀಗೇಕೆ ಹಡಗಿನಲ್ಲಿಟ್ಟಿರುವೆ? ಆಕೆಯನ್ನು ಎಲ್ಲಿ ಬಚ್ಚಿಟ್ಟಿರುವೆ? ಹೇಳು, ದ್ರೋಹಿ. ನಿಜ ಹೇಳದಿದ್ದರೆ ನಿನ್ನ ತಲೆ ಕಡಿಸುವೆನು ಹುಷಾರ್" ಎಂದು ಹೂಂಕರಿಸಿದ.

ರಾಜನ ಮಾತುಗಳಿಂದ ಅದು ಉತ್ಕಲ ದೇಶವೆಂದು ಸಾಗರನು ಅರಿತುಕೊಂಡ. ಯುಕ್ತಿವಂತನಾದ ಸಾಗರನು ರಾಜನನ್ನು ಸಮಾಧಾನಗೊಳಿಸಿ, ತನ್ನ ವಿಷಯವನ್ನೆಲ್ಲಾ ತಿಳಿಸಿದ.

ಕೀರ್ತಿಸಾಗರನು ಹೇಳಿದುದನ್ನು ಕೇಳಿ ರಾಜನು ಪರಮಾನಂದ ಭರಿತನಾದ. ಕೂಡಲೇ ಸಾಗರನನ್ನು ಬಂಧವಿಮುಕ್ತನನ್ನಾಗಿ ಮಾಡಿ, ತನ್ನ ಪಕ್ಕದಲ್ಲಿ ಕುಳ್ಳಿರಿಸಿಕೊಂಡು ಸಮಸ್ತ ಮರ್ಯಾದೆಗಳಿಂದ ಸತ್ಕರಿಸಿದ.

ಸಾಗರನ ಕೋರಿಕೆಯಂತೆ ಉತ್ಕಲ ರಾಜನು ಮಂತ್ರಿ ಸಾಮಂತ ಪರಿವಾರ ದೊಂದಿಗೆ ಗಾಂಧಾರ ದೇಶಕ್ಕೆ ಪ್ರಯಾಣ ಮಾಡಿದ. ಉತ್ಕಲ ರಾಜನು ತನ್ನ ಮನೆಗೆ ಬಂದಿರುವುದನ್ನು ನೋಡಿ ಕುಬೇರಗುಪ್ತನು ಉಬ್ಬಿಹೋದ. ರಾಜಪುತ್ರಿ ದಢಾರನೆಹೋಗಿ ರಾಜನನ್ನು ಅಪ್ಪಿಕೊಂಡಳು. ಆನಂದಾತಿ ರೇಕದಿಂದ ಭಾಷ್ಪಗಳು ಮಿಡಿದವು.

"ಇಂತಹ ಗುಣಾಢ್ಯನಾದಕೀರ್ತಿಸಾಗ ರನು ನನ್ನ ಅಳಿಯನಾದರೆ ನನಗೆ ತುಂಬಾ ಸಂತೋಷ. ನಾನು ಧನ್ಯನಾಗುವೆನು." ಎಂದ ರಾಜ. ತುಂಬು ಮನಸ್ಸಿನಿಂದ ಸಮ್ಮತಿ ಸಿದ ಕುಬೇರಗುಪ್ತ.



ತನ್ನ ಅರಮನೆಯಲ್ಲೇ ವಿವಾಹ ನೆರವೇರ ಬೇಕೆಂದು ಕೋರಿದ ಉತ್ಕಲ ದೇಶದ ರಾಜ. ಎರಡು ಕಡೆಯವರೂ ಉತ್ಕಲ ದೇಶಕ್ಕೆ ಹೋಗಲು ಹಡಗು ಹತ್ತಿದರು.

ಅರ್ಧದಾರಿ ಸೇರುವ ವೇಳೆಗೆ ಉತ್ಕಲ ದೇಶದ ಮಂತ್ರಿಗೆ ದುರ್ಬುದ್ಧಿ ಜನಿಸಿತು. ಈ ಮದುವೆ ನೆರವೇರಿದರೆ ಇನ್ನು ಮುಂದೆ ತನ್ನ ಮಾತು ಸಾಗುವುದಿಲ್ಲವೆಂದು ಆತನಿಗೆ ತೋರಿತು. ಆದುದರಿಂದ ನಿದ್ದೆ ಮಾಡುತ್ತಿದ್ದ ಸಾಗರನನ್ನು ಯಾರಿಗೂ ತಿಳಿಯದಂತೆ ನೀರಿನಲ್ಲಿ ತಳ್ಳಿಬಿಟ್ಟ. ಬೆಳಗಾದ ನಂತರ ಸಾಗರನು ಹಡಗಿನಲ್ಲಿ ಇಲ್ಲದಿರುವುದು ಎಲ್ಲರಿಗೂ ಗೊತ್ತಾಯಿತು. ಎಲ್ಲರ ಮುಖಗಳೂ ಪೆಚ್ಚಾದವು. ಇನ್ನು ಮಾಡುವುದಾದರೂ ಏನಿದೆ? ಖಿನ್ನ




ಮನಸ್ಕರಾಗಿ ಅವರವರ ದೇಶಗಳಿಗೆ ಅವರವರು ಹಿಂತಿರುಗಿದರು.

ನೀರಿನಲ್ಲಿ ಬಿದ್ದ ಕೀರ್ತಿ ಸಾಗರನು ಈಜುತ್ತಾ ಒಂದು ದ್ವೀಪವನ್ನು ಸೇರಿಕೊಂಡ. ಅದೊಂದು ನಿರ್ಜನ ಪ್ರದೇಶ. ಹಾಗೇ ಒಂಟಿಯಾಗಿ ಕಾಲ ಕಳೆಯುತ್ತಿರಲು ಒಂದು ದಿನ ಆತನಿಗೆ ಹಡಗೊಂದು ಕಾಣಿಸಿತು. ಆ ಹಡಗು ನಡೆಸುತ್ತಿದ್ದಾತ ಒಬ್ಬ ಮುದುಕ. ಆತನು ಹಡಗನ್ನು ಒಂದು ಕಡೆ ನಿಲ್ಲಿಸಿ, ಸಾಗರನ ಸಂಗತಿ ಕೇಳಿ ತಿಳಿದುಕೊಂಡ.

"ನಿನ್ನ ದೇಶ ಸೇರಿಸಿದರೆ ನನಗೇನು ಕೊಡುವೆ?" ಎಂದು ಕೇಳಿದ ಮುದುಕ. "ಅರ್ಧಭಾಗ ಕೊಡುವೆನು" ಎಂದ ಸಾಗರ ತಡಬಡಿಸದೆ.

ಆ ವೃದ್ಧನು ಸಾಗರನನ್ನು ಉತ್ಕಲ ದೇಶದ ತೀರಕ್ಕೆ ತಂದು ಬಿಟ್ಟು, ತನ್ನದಾರಿ ತಾನು ಹಿಡಿದ. ಕೀರ್ತಿ ಸಾಗರನು ಅರಮನೆಯ ಕಡೆ ಹೋಗುತ್ತಿರಲು, ರಾಜಭಟರು ಈ ಹೊಸಬನನ್ನು ಬಂಧಿಸಿ ಮತ್ತೆ ರಾಜನ ಎದುರಿನಲ್ಲಿ ನಿಲ್ಲಿಸಿದರು. ಕೀರ್ತಿಸಾಗರನನ್ನು ನೋಡಿ ರಾಜ ಆನಂದ ಪುಲಕಿತನಾದ. ರಾಜಪುತ್ರಿಗೂ ಈ ಸುದ್ದಿ ಹೋಯಿತು. ಆಕೆಗೆ ಹೋದ ಪ್ರಾಣ ಮತ್ತೆ ಬಂದಂತಾಯಿತು. ನಗರದಲ್ಲೆಲ್ಲಾ ಆನಂದ ಸಡಗರ.

ರಾಜನಿಗೆ ನಿಜ ವಿಷಯ ತಿಳಿಯಿತು. ಸಾಗರನ ಬಯಕೆಯಂತೆ ರಾಜನು ಮಂತ್ರಿಯನ್ನು ಗಡರಿಸಿ, ಕಳುಹಿಸಿಬಿಟ್ಟ. ಸಾಗರನಿಗೂ ರಾಜಕುಮಾರಿಗೂ ಅತ್ಯಂತ ವೈಭವದಿಂದ ವಿವಾಹ ನಡೆಯಿತು.

ರಾಜನು ತನ್ನ ಅಳಿಯನನ್ನು ಉತ್ಕಲ ದೇಶದ ರಾಜನನ್ನಾಗಿ ಮಾಡಲು ನಿಶ್ಚಯಿಸಿದ. ಸುಮುಹೂರ್ತವನ್ನು ನೋಡಿ ಪಟ್ಟಾಭಿಷೇಕದ ಏರ್ಪಾಟು ಮಾಡಿದ. ರಾಜ ಪೋಷಾಕು ಮತ್ತು ನವರತ್ನ ಖಚಿತವಾದ ಕಿರೀಟಗಳೊಂದಿಗೆ ಸಾಗರನು ಸಿಂಹಾಸನವನ್ನು ಅಲಂಕರಿಸಿದ. ದರ್ಬಾರು ತುಂಬಿ ತುಳುಕಾಡುತ್ತಿತ್ತು.

ಈ ಆನಂದಭರಿತ ಸಮಯದಲ್ಲಿ ಒಬ್ಬ ಮುದುಕನು ಅಲ್ಲಿಗೆ ಬಂದ. ಭಟರು ಆತನನ್ನು ಹೊರದೂಡುವುದರಲ್ಲಿದ್ದರು. ಆದರೆ ಸಾಗರನು ಅವರನ್ನು ತಡೆದು, ಕೂಡಲೇ

ಸಿಂಹಾಸನದಿಂದಿಳಿದು ಆ ಮುದುಕನಿಗೆ ಸಕಲ ಮರ್ಯಾದೆಗಳನ್ನುಮಾಡಿ, ತನ್ನ ಪಕ್ಕ ದಲ್ಲಿ ಕುಳ್ಳಿರಿಸಿಕೊಂಡ.

ಅಲ್ಲಿ ನೆರೆದಿದ್ದ ಸಭಿಕರಿಗೆ ಇದರ ಅರ್ಥ ತಿಳಿಯಲಿಲ್ಲ. ಎಲ್ಲರೂ ಬೆಪ್ಪಾಗಿ ನೋಡು ತ್ತಿದ್ದರು. ಆಗ ಸಾಗರನು ಉತ್ಕಲ ದೇಶದ ಭೂಪಟವನ್ನು ತರಿಸಿ ಗೋಡೆಗೆ ನೇತುಹಾಕಿ ಸಿದ. ಆ ಮುದುಕನ ಕಡೆಗೆ ತಿರುಗಿ "ಅಯ್ಯಾ ನಿನ್ನ ಉಪಕಾರ ಮರೆತಿಲ್ಲ. ಇದೇ ಉತ್ಕಲ ದೇಶದ ಭೂಪಟ. ದೈವಕೃಪೆಯಿಂದ ನಾನು ಈಗ ಈ ದೇಶದ ಅಧಿಪತಿ. ನಿನಗೆ ಬೇಕಾದ ಅರ್ಧ ರಾಜ್ಯವನ್ನು ಗುರುತು ಹಾಕಿ ತೋರಿಸು. ಈಗಲೇ ನಿನಗೆ ಒಪ್ಪಿಸುತ್ತೇನೆ" ಎಂದ.

ಅದಕ್ಕೆ ಆ ಮುದುಕನು ಗಳಗಳನೆ ಆನಂದ ಬಾಷ್ಪ ಸುರಿಸುತ್ತಾ ಸಾಗರನ ಕಾಲಿಗೆ ಬಿದ್ದು "ಸಾಗರ, ನೀನು ಗುಣಸಾಗರನೇ ಸರಿ. ನನ ಗೇಕೆ ಈ ರಾಜ್ಯ? ನಿನಗೆ ನೆನಪಿದೆಯೋ ಇಲ್ಲವೋ ನಾನರಿಯೆ. ಸಾವಿರ ರಾಜ್ಯಗಳಿಗೂ ಹೆಚ್ಚಾದ ಸ್ವೇಚ್ಛೆಯೆಂಬ ರಾಜ್ಯವನ್ನು ಅಂದೇ ನನಗೆ ಕರುಣಿಸಿರುವೆ. ನಾನು ಕೇಳದೆಯೇ ಅನುಗ್ರಹಿಸಿ ಪುಣ್ಯ ಸಂಪಾದಿಸಿರುವೆ. ನಾನುನಿಜವಾಗಿ ಹಡಗು ನಡೆಸುವವನಲ್ಲ. ಅಂದು ನೀನು ಗುಲಾಮ ಗಿರಿಯಿಂದ ಪಾರು ಮಾಡಿದವರಲ್ಲಿ ನಾನೊಬ್ಬ. ನಿಮಗೆಕಷ್ಟ ಒದಗಿತೆಂದು ತಿಳಿದು ತುಸವಾದರೂ ನಿನ್ನ ಋಣವನ್ನು ತೀರಿಸಿಕೊಳ್ಳಬೇಕೆಂದು ಹಡಗಿನಲ್ಲಿ ಬಂದು, ನಿನ್ನನ್ನು ಇಲ್ಲಿಗೆ ಕರೆ ತಂದೆ. ನೀನೀಗ ರಾಜನಾದೆ ಎಂದು ತಿಳಿದು ಆಶೀರ್ವಾದ ಮಾಡಿ ಹೋಗಲು ಬಂದೆ. ಅಷ್ಟೇ ಹೊರತು ನಾನೀ ರಾಜ್ಯವನ್ನು ಕಟ್ಟಿಕೊಂಡು ಏನು ಮಾಡಲಿ? ಹೇಳು ತಂದೆ!" ಎಂದ.

ಆಗ ಸಾಗರನು ಆ ಮುದುಕನ ವೃತ್ತಾಂತ ವನ್ನು ಸಭಿಕರಿಗೆ ವಿವರಿಸಿ ಹೇಳಿದ. ಅವರೆಲ್ಲಾ ಆಶ್ಚರ್ಯಗೊಂಡರು. 'ಗುಲಾಮನಾದರೇನು! ಕೈಗೆ ಬಂದ ಅರ್ಧರಾಜ್ಯವನ್ನು ಬಿಟ್ಟುಕೊಡ ಬೇಕಾದರೆ ಆ ಮುದುಕ ಎಂತಹ ತ್ಯಾಗ ಮೂರ್ತಿಯಾಗಿರಬೇಕು!' ಎಂದು ನೆರೆದಿದ್ದವ ರೆಲ್ಲಾ ಆ ಮುದುಕನನ್ನು ಮೆಚ್ಚಿಕೊಂಡರು.



## ಘನವೈದ್ಯರು !

ಕೋದಂಡ್ರಾಯರು ರೋಗದಿ ಬಿದ್ದರು.
ಕುಟುಂಬ ವೈದ್ಯರು ಕೈಯನು ಬಿಟ್ಟರು.
ದೊಡ್ಡ ಡಾಕ್ಟರನು ಬರಮಾಡಿದರು.
'ಸಾಧ್ಯವಿಲ್ಲೆ'ಂದು ಹೇಳಿಬಿಟ್ಟರು.
ಮೂರನೆ ಪಂಡಿತ ಮುಖತಿರುಗಿಸಿದ
ಸ್ಪೆಷಲಿಸ್ಟ್ ಬಂದು ಕಸವಿಸಿಗೊಳಿಸಿದ
ಹಕೀಮ ಬಂದ ನಾಡಿಯ ಹಿಡಿದ
'ಶಸ್ತ್ರಚಿಕಿತ್ಸೆಯ ಮಾಡಿಸಿ'ರೆಂದ.
ಸರ್ಜನ್ ದೊರೆಗಳ ಬರಮಾಡಿದರು
ಆರುಮಂದಿಗಳು ತರ್ಕಮಾಡಿದರು
ಹೊಸ ಹೆಸರೊಂದು ಸರ್ಜನ್ರೆಂದರು
ಕೇಳಿ ಎಲ್ಲ ದಿಗಿಲೊಂದಿದರು.
ದಿಗಿಲನು ಹರಿಸುತ ವೀರಣ ವೈದ್ಯ
ಬಂದು ಪರೀಕ್ಷಿಸಿ 'ಆಯಿತು ವೇದ್ಯ,
ದಂತ ದೋಷವಿದು' ಎಂದೊಡನೆಲ್ಲರು,
ಡೆಂಟಿಸ್ಟ್ ಡಾಕ್ಟರ ಕರೆದು ತಂದರು.
ಎಂಟುಮಂದಿಯೂ ಕೂಡೀ ನೋಡೀ
'ಮೆದುಳು ಕೆಟ್ಟಿದೇ ನಿಜ ತ್ವರೆಮಾಡಿ!
ಎಕ್ಸ್‌ರೇ ಡಾಕ್ಟರು ತತ್‌ಕ್ಷಣ ಬರಲಿ'
ಎಂದೊಡನೆ ತರಿಸಿದರು ಟ್ಯಾಕ್ಸಿಯಲಿ.
ಎಕ್ಸ್‌ರೇ ನಿಪುಣರು ರೋಗಿಯ ಪರಿಕಿಸಿ
ಘನವೈದ್ಯರುಗಳ ನೋಡುತೆ ಗುಣಿಸಿ
'ಒಂದು ಕಡಿಮೆಯಿದೆ—ಲೇಡೀ ಡಾಕ್ಟರು'
ಎಂದುದೆ ತಡ ಅವಳನು ಕರೆಸಿದರು.
ಲೇಡೀಡಾಕ್ಟರು ರೋಗಿಯ ಕಂಡಳು,
ನಾಡಿಯ ಮುಟ್ಟಿ ಮೆಟ್ಟಿಯೆ ಬಿದ್ದಳು!
ನೋಡಲು ಮಾಡಲು ಅಲ್ಲೇನಿತ್ತು?
ಯಾವಾಗೋ ಕೈದಾಟಿತ್ತು!!!

—"ರಂಗ"

## ನನ್ನ ಬೊಂಬೆ

ಅಣ್ಣನು ತಂದ ಬೊಂಬೆಯ ನೋಡಿ
ಕುಣಿಯುವೆನು ನಾ ಕುಣಿಯುವೆನು.
ಕಣ್ಣಿಗೆ ಕಾಡಿಗೆ ಹಚ್ಚುವೆನು, ಈ
ಬೊಂಬೆಯ ಕಣ್ಣಿಗೆ ಹಚ್ಚುವೆನು.
ಬಣ್ಣದ ಅಂಗಿಯ ಹಾಕುವೆನು, ಈ
ಬೊಂಬೆಗೆ ಅಂಗಿಯ ಹಾಕುವೆನು.
ಕಾಲಿಗೆ ಬೂಟ್ಸನು ಸಿಕ್ಕಿಸಿ ದಡದಡ
ಓಡಿಸಿ ಆಡಿಸಿ ನಲಿಸುವೆನು.
ಕಣ್ಣಿಗೆ ಚಕ್ರವ ಇರಿಸುವೆನು ಈ
ಬೊಂಬೆಯ ಕಣ್ಣಿಗೆ ತೊಡಿಸುವೆನು
ಪರಿಮಳ ಕುಂಕುಮ ಹಾಕುವೆನು ನಾ
ಹಣೆಯಲಿ ನಡುವಿಗೆ ಹಾಕುವೆನು.
ಶಾಲೆಗೆ ಒಯ್ಯುವೆನು ಈ ಬೊಂಬೆಯ
ಚೀಲದ ಒಳಗೇ ಇರಿಸುವೆನು.
ಗೆಳೆಯರಿಗೆಲ್ಲಾ ತೋರಿಸುವೆನು ಉ
ಲ್ಲಾಸದಿಂ ಕುಣಿದು ಹಾರುವೆನು.
ಪೆಪ್ಪರಮಿಂಟನು ನೆಕ್ಕಿಸುವೆನು ನಾ
ಕಾಫೀ ಕೊಕ್ಕೋ ಕುಡಿಸುವೆನು.
ಸಂತೆಯಲೆಲ್ಲಿಯು ಕಾಣದು ನೋಡಿ
ಇಂಥಾ ಬೊಂಬೆ ಇದೊಂದೇ ನೋಡಿ!
ಅಂತರಿಕ್ಷದಿಂದೆಂತೋ ಏನೋ
ಅಣ್ಣನು ಕೊಟ್ಟಪರೂಪದ ಬೊಂಬೆ!
ಮಲಗಿಸುವೆನು ನನ್ನಯ ಜತೆಯಲ್ಲೇ
ನಿದ್ದೆಯ ಕ್ರಮವನು ಕಲಿಸುವೆನು.
ತುಂಬಾ ಜೋಗುಳ ಪದಗಳ ಕಲಿತು
ಹಾಡೀ ತಟ್ಟೀ ಮಲಗಿಸುವೆ.
ಬೊಂಬೆಗಳಾಡುವ ಕನಸನು ಕಾಣುತ
ಸುಂದರ ನಿದ್ರೆಯಮಾಡುವೆನು.

—ಬಿ. ಅಹಮ್ಮದ್ ಪೈವಳಿಕೆ

## ಬಣ್ಣದ ಚಿತ್ರ ಕಥೆ—೩

ಆ ಶಬ್ದ ಜ್ವಾಲಾಮುಖ ರಾಕ್ಷಸನದೇ. ಆತನು ಥೊರಿಕೆಯಂತೆ ಉಸಿರು ಬಿಡುತ್ತಾ, ಆತುರದಿಂದ ಅಡುಗೆಯ ಕೋಣೆಯನ್ನು ಪ್ರವೇಶಿಸಿ "ಎಲ್ಲಿ? ಎಲ್ಲಿ? ದುರ್ಮಾರ್ಗ ಮಾನವ ಎಲ್ಲಿದ್ದಾನೆ?" ಎನ್ನುತ್ತಾ ಕೋಣೆಯೆಲ್ಲಾ ಗಲಾಟೆ ಮಾಡ ತೊಡಗಿದ.

ಈ ಗಡಿಬಿಡಿ ನೋಡಿ ಅವನ ಹೆಂಡತಿ "ಬಾರಯ್ಯಾ ಇಲ್ಲಿ. ಯಾವಾಗಲೂ ಇದೇ ಹಾಡು! ಮನುಷ್ಯನೂ ಇಲ್ಲ, ಮಣ್ಣೂ ಇಲ್ಲ" ಎಂದು ಗಟ್ಟಿಯಾಗಿ ನಿಂದಿಸಿದಳು. ಜ್ವಾಲಾಮುಖ ಅವಳು ಬಡಿಸಿದ್ದನ್ನು ಉಂಡು ಎದ್ದ. ಬಳಿಕ, "ನನ್ನ ಬಂಗಾರದ ಕೋಳಿ ಎಲ್ಲಿ?" ಎಂದು ಕೂಗಿದ.

ಅವಳು ಅಂದವಾದೊಂದು ಹೇಟೆಯನ್ನು ತಂದು ಗಂಡನ ಇದಿರು ಮೇಜಿಯ ಮೇಲೆ ಇಟ್ಟಳು. ಇದೆಲ್ಲಾ ಗಂಗಣ್ಣ ಕಣ್ಣಿನಮೇಲೆ ಕಣ್ಣಿಟ್ಟು ನೋಡುತ್ತಲೇ ಇದ್ದ. "ಮೊಟ್ಟೆ ಇಡು ಹೂಂ—ಒಂದು..." ಎಂದು ಗದರಿಸಿದ ರಾಕ್ಷಸ. ಆ ಬಂಗಾರು ಹೇಟೆ ಒಂದು ಬಂಗಾರದ ಮೊಟ್ಟೆಯನ್ನು ಇಟ್ಟುಬಿಟ್ಟಿತು.

ಬಹಳ ಉತ್ಸಾಹದಿಂದ ಅವನು ಅಂಕೆಗಳನ್ನು ಹೇಳುತ್ತಾ ಬಂದ. ಅಂಕೆಗಳ ಪ್ರಕಾರ ಲೆಕ್ಕ ತಪ್ಪದಂತೆ ಬಂಗಾರು ಮೊಟ್ಟೆ ಇಡುತ್ತಲೇ ಇತ್ತು ಆ ಬಂಗಾರು ಕೋಳಿ. ಹೀಗೆ ಅದು ಇಟ್ಟ ಮೊಟ್ಟೆಗಳು ಒಂದು ದೊಡ್ಡ ರಾಶಿಯಾದುವು. ಈ ರಾಶಿಯನ್ನು ನೋಡುತ್ತಾ ಅತ್ಯಾನಂದದಿಂದ ಜ್ವಾಲಾಮುಖನು ಕುರ್ಚಿಯ ಮೇಲೆ ಹಾಗೇ ನಿದ್ರೆಹೋಗಿಬಿಟ್ಟ!

ಆಗ ಗಂಗಣ್ಣ ಮೆಲ್ಲಗೆ ಎದ್ದ. ಯಾರಿಗೂ ಕಾಣದಂತೆ ಮೇಜಿಯ ಬಳಿಗೆ ಬಂದ. ಹೇಟೆಯನ್ನು ಎತ್ತಿಕೊಂಡು ಹೊರಗೆ ಓಡಿದ!

ಅಲ್ಲಿ ಗಂಗಣ್ಣನ ತಾಯಿ ಮಗನಿಗಾಗಿ ದಾರಿ ಕಾಯುತ್ತಿದ್ದಳು. ಗಂಗಣ್ಣನನ್ನು ಕಾಣುತ್ತಲೇ ಮೊದಲಿನಂತೆ ಬಯ್ಯ ತೊಡಗಿದಳು. ಆದರೆ ಅವನ ಕೈಯಲ್ಲಿ ಕೋಳಿಯನ್ನು ಕಾಣುತ್ತಲೇ ಅವಳ ಸಂತೋಷಕ್ಕೆ ಮೇರೆ ಇಲ್ಲದೆ ಹೋಯಿತು. ಆ ಕೋಳಿಯ ಕೀಲಕವನ್ನು ಗಂಗಣ್ಣ ಕಣ್ಣಾರೆ ಕಂಡು ತಿಳಿದಿದ್ದಾನಲ್ಲವೆ?

ಅದರಿಂದ ಬಂಗಾರದ ಮೊಟ್ಟೆಗಳನ್ನಿಡಿಸಿ, ಅದನ್ನು ಮಾರಿ ತಾಯಿಯೂ ಮಗನೂ ಜೀವಿಸಿಕೊಂಡು ಬಂದರು. ಆದರೆ ಆ ದಿನ ತನ್ನನ್ನು ಅಡಗಿಸಿದ ಅಪ್ಸರಸಿ ಹೇಳಿದ ಮಾತನ್ನು ಮಾತ್ರ ಗಂಗಣ್ಣ ಮರೆಯಲಿಲ್ಲ. ದುಷ್ಟನಾದ ಜ್ವಾಲಾಮುಖನ ಪೀಡೆಯನ್ನು ತೊಲಗಿಸುವುದು ಹೇಗೆ?—ಎಂದು ಯಾವಾಗಲೂ ತನ್ನೊಳಗೆ ಯೋಚನೆ ಮಾಡುತ್ತಿದ್ದನು.

*

# ಟೈಪ್‌ರೈಟಿಂಗ್ ಚಿತ್ರ



ಬಿ. ಕೆ. ಮೂರ್ತಿ



ಎಸ್. ಸುಂದರ್



ಸಿ. ಶಿವರಾವ್



ಮಂಗೇಶ ನಾಯ್ಕ

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ 10 ರೂ.

1953 ಡಿಸಂಬರ್ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ:





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಅಕ್ಟೋಬರ್ 10 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸವುದಿಲ್ಲ

ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು-26.

---

### ನವಂಬರ್ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ: ಹೊರೆ ತುಂಬಿದ ದೋಣಿ

ಎರಡನೇ ಫೋಟೋ: ಹೇರಿಳಿಸುವ ಏಣಿ

ಕಳಿಸಿದವರು: ಬಿ. ಕೆ. ಮೂರ್ತಿರಾವ್, ಬೆಂಗಳೂರು

ನವಂಬರ್ ಸಂಚಿಕೆಯಲ್ಲಿ ಈ ಮೇಲಿನ ಶೀರ್ಷಿಕೆಗಳು ಬರುತ್ತವೆ. ಸದರಿ ಬಹುಮಾನದ ಮೊಬಲಗು ರೂ. 10/- ನ್ನು ನವಂಬರ್ ಸಂಚಿಕೆ ಹೊರಟ ಕೂಡಲೇ ಕಳುಹಿಸಲ್ಪಡುತ್ತದೆ.

ಬರುತ್ತಿದೆ!

ವಿಜಯರವರ

# ಚಂದ್ರಹಾರಂ

ದಿಗ್ದರ್ಶಕರು

ಕೆ.ಕಾಮೇಶ್ವರರಾವ್ B.A.



ನಿರ್ಮಾಪಕರು...ನಾಗಿರೆಡ್ಡಿ & ಚಕ್ರಪಾಣಿ

Printed by B. NAGI REDDI at the B. N. K. Press Ltd., Madras 26, and Published by him for Chandamama Publications, Madras 26 Controlling Editor: SRI CHAKRAPANI.

Photo by A. L. Syed



ಬಹುಮಾನ
ಪಡೆದ ಶೀರ್ಷಿಕೆ

ಭವನದಂತಸ್ತು

ಕಳಿಸಿದವರು :
ಬಿ. ಗಿರಿಜಾಕುಮಾರಿ, ಕುಂದಾಪುರ

